ಅರವಿಂದ ಗ್ರಂಥ ಮಾಲೆಯು. ೩ನೇ ವರ್ಷದ ೫ನೆಯ ಕಮಲ

ಮಹರ್ಷಿ ಅರವಿಂದ ಘೋಷರ

# 'ಪೂರ್ಣಯೋಗ'

## ಪ್ರಥಮಪಾದ—ಆಧಾರಶುದ್ಧಿ

## Yogic Sadhan



ಅನುವಾದಕ

ಮಧುರಚೆನ್ನ

ಮಾರ್ಚ] ೧ ರೂ. [೧೯೩೮

ಪ್ರಕಾಶಕರು :—
ಬಿ. ಡಿ. ಅಕ್ಕಿ ಬಿ. ಎ. ಎಲ್‌ಎಲ್. ಬಿ.
“ ಅರವಿಂದ ಗ್ರಂಥಮಾಲಾ ”
ಹಲಸಂಗಿ ( ಜಿಲ್ಹಾ-ವಿಜಾಪುರ )

ಸಂಪಾದಕರು :—
“ **ಮಧುರಚೆನ್ನ** ”

ಮುದ್ರಕರು :—
ಶೇಷಗಿರಿರಾವ ಗೋವಿಂದರಾವ ಕುಲಕರ್ಣಿ
ಸಾಧನ ಮುದ್ರಣಾಲಯ
ಧಾರವಾಡ
೨೫—೩೮

# ನಮ್ಮ ಮಾತು

ಆಧುನಿಕ ಕಾಲದ ಆಧ್ಯಾತ್ಮ ಸಮಸ್ಯೆಯನ್ನು ನಮ್ಮ ನಾಡಿನ ಓದುಗರು ಅರಿಯಬೇಕೆಂದೇ ನಮ್ಮ ಗ್ರಂಥ ಮಾಲೆಯಲ್ಲಿ ಅಂಥ ಪುಸ್ತಕಗಳನ್ನು ಹೆಚ್ಚಾಗಿ ಪ್ರಕಟಿಸುತ್ತ ಬಂದಿದ್ದೇವೆ. 'ಪೂರ್ಣ ಯೋಗ'ವು ಅವೆಲ್ಲವುಗಳಲ್ಲಿ ಕಳಸವಿದ್ದಂತೆ. ಇದನ್ನರಿತುಕೊಳ್ಳಬೇಕೆನ್ನುವವರು ನಮ್ಮ ಉಳಿದೆಲ್ಲ ತಾತ್ವಿಕ ಪುಸ್ತಕಗಳನ್ನು ಓದುವದರಿಂದ ಅವರಿಗೆ ಅದು ಸುಗಮವಾಗುತ್ತದೆ.

ಹೊಸಕಾಲದ ಸಂದೇಹವಾದದಿಂದ ಸತ್ಯಕ್ಕೆ ಹೇಗೆ ಮುಟ್ಟಬೇಕೆಂಬುದರ ಕೂಲಂಕಷ ವಿಚಾರವನ್ನು 'ಬಾಳಿನಲ್ಲಿ ಬೆಳಕು' ತೋರಿಸಿ ಕೊಡುವದು. ಭಾವೀ ಹಿಂದುಸ್ಥಾನದ ಕಲ್ಯಾಣವು ಅಧ್ಯಾತ್ಮದಿಂದಲೇ ಹೇಗೆ ಆಗತಕ್ಕದ್ದಿದೆಯೆಂಬುದನ್ನು 'ಭಾರತೀಯ ನವಜನ್ಮ'ದಲ್ಲಿ ಕಾಣಬಹುದು. ಅಧ್ಯಾತ್ಮವು ಗಿಡಗಂಟಿಗಳೊಳಗೂ ಕಲ್ಲುಮಣ್ಣಿನೊಳಗೂ ಹೇಗೆ ಹುದುಗಿಕೊಂಡು ಕುಳಿತಿದೆಯೆಂಬುದನ್ನು 'ಅವ್ಯಕ್ತ'ವು ತೋರಿಸಿಕೊಡುವದು. ಈ ಮಾರ್ಗವು ಎಷ್ಟು ಬಿಕ್ಕಟ್ಟಿನದಾಗಿದೆಯೆಂಬುದನ್ನು 'ಬೆಳಗಿ'ನಿಂದ ಮನಗಾಣಬಲ್ಲೆವು. ಅನಂತ ಪರಮಾತ್ಮನೂ ಅಣುಮಾತ್ರ ಜೀವಾತ್ಮನೂ ಒಬ್ಬರೊಳಗೊಬ್ಬರು ಹೇಗೆ ಓತಪ್ರೋತರಾಗಿರುವರೆಂಬುದನ್ನು 'ನಂದನವನ'ದೊಳಗಿನ ಭವ್ಯಸ್ವಪ್ನದಿಂದ ಅರಿತುಕೊಳ್ಳುವೆವು. ದೈವವೂ ಪ್ರಯತ್ನವೂ ಇಂಥ ಪರಮಾತ್ಮ ಜೀವಾತ್ಮರ ಪರಸ್ಪರ ಪೂರಕ ಶಕ್ತಿಗಳೆಂಬುದನ್ನು 'ಕನ್ನಡಿಗರ ಕುಲಗುರು'ವಿನಲ್ಲಿರುವ ದೈವ ಮತ್ತು ಪ್ರಯತ್ನವೆಂಬ ಪ್ರಬಂಧವು ಮನಗಾಣಿಸಿ ಕೊಡುವದು ಅದೇ ಪುಸ್ತಕದೊಳಗಿನ ದೇವತಾ ಪ್ರಕರಣವನ್ನು

ಓದದಿದ್ದರೆ ಪೂರ್ಣಯೋಗದೊಳಗಿನ ಮುಖ್ಯ ಮಾತುಗಳಿಗೇ ಅರ್ಥ ವಾಗುವದು ಕಷ್ಟ. 'ಪವಿತ್ರ ಜೀವನ'ದೊಳಗಿನ ಜೀವಪುತ್ರನ ಕಥೆಯು ಇಂದಿನ ಆಧ್ಯಾತ್ಮಿಗಳಿಗೆ ವಿಪುಲ ಉಪದೇಶಗಳನ್ನು ಬೋಧಿಸುವದು.

ಹೀಗೊಂದು ರೀತಿಯಿಂದ ನಮ್ಮೀ ಪುಸ್ತಕಗಳ ಪ್ರಕಾಶನದಲ್ಲಿ ನಮ್ಮದೊಂದು ಅವ್ಯಕ್ತ ಉದ್ದೇಶವಿರುವದನ್ನು ಇದೀಗ ನಾವು ಬೇಕೆಂತಲೇ ಒಡೆದು ಹೇಳುತ್ತೇವೆ. 'ಪೂರ್ಣಯೋಗ'ದ ವಾಚಕರು ಇದರ ಉಪಯೋಗ ಮಾಡಿಕೊಳ್ಳುವರೆಂದು ಭಾವಿಸಿದ್ದೇವೆ.

ಮಹರ್ಷಿ ಅರವಿಂದರ ವಿಚಾರಗಳನ್ನು ಬಹು ಏಕಾಗ್ರಚಿತ್ತದಿಂದ ಪರಿಶೀಲಿಸಬೇಕಾಗುವದರಿಂದ ಆ ವಿಷಯದಲ್ಲಿ ಎಷ್ಟು ಪ್ರಯತ್ನಿಸಿದರೂ ಸ್ವಲ್ಪವೇ. ಆದ್ದರಿಂದ ವಾಚಕರಿಗೆ ಸುಗಮವಾಗಬೇಕೆಂದು ಬಹು ಕಷ್ಟದಿಂದ ಪ್ರಸ್ತುತ ಗ್ರಂಥಕ್ಕಾಗಿ ಅನುವಾದಕರು ಬರೆದ ಪ್ರಥಮ ಪ್ರವೇಶವೆಂಬ ದೀರ್ಘಪ್ರಬಂಧವನ್ನೂ ಮುಂದಿನ ಪ್ರತಿಯೊಂದು ಪ್ರಕರಣಗಳ ಆರಂಭದಲ್ಲಿ ಬರೆದ ಪ್ರಕರಣೋಪಕ್ರಮಣಿಕೆಗಳನ್ನೂ ವಾಚಕರು ಸಾವಧಾನಚಿತ್ತದಿಂದ ಮನನಮಾಡಬೇಕೆಂದು ಹಾರೈಸುವೆವು.

ಪ್ರಸ್ತುತ ಪುಸ್ತಕವನ್ನು ಅತ್ಯಂತದಕ್ಷತೆಯಿಂದ ಬಹು ಶೀಘ್ರದಲ್ಲಿ ಮುದ್ದಾಗಿ ಮುದ್ರಿಸಿದ ಧಾರವಾಡದ ಸಾಧನ ಪ್ರೆಸ್ಸಿನ ಒಡೆಯರಾದ ಗೆಳೆಯ ಶೇಷಗಿರಿರಾಯರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

**ಪ್ರಕಾಶಕ**

ಶ್ರೀಮನ್ನಿರಂಜನ

ಜಗದ್ಗುರು ಮೂರುಸಾವಿರ ಮಠ, ಹುಬ್ಬಳ್ಳಿ

ಶ್ರೀ ಗುರುಸಿದ್ಧರಾಜ ಮಹಾಸ್ವಾಮಿಗಳವರು,

ಈ ಮಹನೀಯರ ಉದಾರ ಸಹಾಯದಿಂದಲೇ

ಪ್ರಸ್ತುತ ಯೋಗಗ್ರಂಥವು ಕನ್ನಡಿಗರ

ಹಸ್ತಗತವಾಯಿತು.

ಇದಕ್ಕಾಗಿ ನಾವು ತುಂಬಾ ಕೃತಜ್ಞರಿದ್ದೇವೆ.

# ಪರಿವಿಡಿ

Aum

# ಪ್ರಥಮ ಪ್ರವೇಶ

( ಪದದ ಅರ್ಥ ಪಲ್ಲವಿಯಲ್ಲಿ )

## ನವಯುಗದ ಕೋರಿಕೆ:

" ಶಕ್ತಿ-ಜ್ಞಾನ-ಸಮಗ್ರತೆ "

---

ಅನುವಾದಕನ ಕಕ್ಕುಲತೆ

# ನವಯುಗದ ಕೋರಿಕೆ

## ೧ ಶಕ್ತಿಯ ಆಹ್ವಾನ

" ಎಲಾ ಮಾನವಾ, ಪುರಾತನವು ನಿನಗೆ ಪುಣ್ಯಶಾಲಿಯಾಗೆಂದು ಬೋಧಿಸಿತು; ಆದರೆ ನಾನು ನಿನಗೆ ಸಮರ್ಥನಾಗೆಂದು ಉಪದೇಶಿಸುತ್ತೇನೆ. ಪುರಾತನವು ನಿನಗೆ—ಮಾನವಾ, ಸತ್ಪುರುಷನಾಗೆಂದು ಹೇಳಿತು; ಆದರೆ ನಾನು ನಿನಗೆ—ಎಲಾ ಮಾನವಾ, ಮಹತ್ತರ ವ್ಯಕ್ತಿಯಾಗೆಂದು ಹೇಳುತ್ತೇನೆ. ಪುರಾತನವು ನಿನಗೆ—ಮನುಷ್ಯನೇ, ನೀನು ಮಾನವಮಾತ್ರನಾದ್ದರಿಂದ ಸಾಮಾನ್ಯ ಮಾರ್ಗದಿಂದ ಸಾಮಾನ್ಯರೊಂದಿಗೆ ಸಾಗೆಂದು ಉಪದೇಶಿಸಿತು; ಆದರೆ ನಾನು ನಿನಗೆ—ಎಲಾ ಮಾನವಾ, ನೀನು ಮಾನವಮಾತ್ರನಲ್ಲ, ಸಾಮಾನ್ಯನಲ್ಲ, ಸಾಧಾರಣವನ್ನು ಮೆಟ್ಟಿ ಅಸಾಧಾರಣನಾಗು, ಅತಿಮಾನವ ( ಸುಪರ್ ಮನ್ ) ನಾಗು—ಎಂದು ಬೋಧಿಸುತ್ತೇನೆ. "

ಹತ್ತೊಂಭತ್ತನೆಯ ಶತಮಾನದ ಕೊಟ್ಟಕೊನೆಯ ಮುಹೂರ್ತದವರೆಗೆ ಹೀಗೆ ಶಕ್ತಿಮಂತ್ರವನ್ನು ಉದ್ಘೋಷಿಸಿ ಜರ್ಮನ್ ತತ್ತ್ವವೇತ್ತನಾದ ನೀಟ್ಸೆ ( Nietzsche ) ಜಗತ್ತಿನ ಕಣ್ಣಿಗೊಂದು ಹೊಸ ಅಂಜನವನ್ನೇ ಹಚ್ಚಿದನು. ಇತ್ತ ಶ್ರೀರಾಮತೀರ್ಥ ಹಾಗೂ ಸ್ವಾಮಿ ವಿವೇಕಾನಂದರು ಅದೇ ಮುಹೂರ್ತದಲ್ಲಿ ಅದೇ ಅಂಜನವನ್ನು ಪಶ್ಚಿಮದ ಪೇಟೆಗಳಲ್ಲಿ ಮಾರಿ ಪ್ರಶಸ್ತಿಯನ್ನು ಪಡೆದು ಪೌರಸ್ತ್ಯರ ಕಣ್ಣುಗಳಿಗೆ ಒಳಿತಾಗಿ ಲೇಪಿಸಿದರು.

" ಆತ್ಮನು ಸರ್ವಸಮರ್ಥನು; ಸರ್ವಾಂತರ್ಯಾಮಿಯು; ಸರ್ವಜಯಿಯು. ಆತನನ್ನು ಎದುರಿಸುವ ಸಾಮರ್ಥ್ಯ ಇನ್ನಾವುದಕ್ಕುಂಟು ?

ಸರ್ವಂ ಖಲ್ವಿದಂ ಬ್ರಹ್ಮ; ಶಿವೋಽಹಂ ಶಿವೋಽಹಂ." ಅಚಲ ಹಿಮಾಲಯದ ಈ ಅಮರಮಂತ್ರವನ್ನು ದಿಗಂತವ್ಯಾಪಿಯಾಗಿ ವೇದಾಂತ ಕೇಸರಿಗಳಿರ್ವರೂ ಗರ್ಜಿಸಿದರು!!!

ಹೀಗೆ ಪೂರ್ವಪಶ್ಚಿಮಗಳೆರಡರಲ್ಲಿಯೂ ಒಂದೇ ಝಂಝಾ ವಾತವು ಏಕಕಾಲಕ್ಕೆ ತನ್ನ ರೌದ್ರವನ್ನೆಬ್ಬಿಸಿತು.

'ಶ್ರೇಯವಾವುದು? ಮಾನವನೊಳಗೆ ಯಾವುದು ಶಕ್ತಿಯ ಪ್ರತೀತಿಯನ್ನು ಶಕ್ತಿಯ ಅಭಿಲಾಷೆಯನ್ನು, ಒಟ್ಟಾರೆ ಶಕ್ತಿಯೆಂಬು ದನ್ನು ವಿಸ್ತಾರಗೊಳಿಸುವದೋ ಅದೇ!......

'ಹೇಯವಾವುದು? ದುರ್ಬಲತಾಜನ್ಯವಾದುದೇನುಂಟೋ ಅದೇ!......

'ಸುಖವೆಂದರೇನು? ಶಕ್ತಿಯು ವೃದ್ಧಿಂಗತವಾಗುತ್ತಲಿದೆ, ವಿಘ್ನಗಳು ಭಗ್ನಗೊಳಿಸಲ್ಪಡುತ್ತಿವೆ, ಎಂಬ ಪ್ರತೀತಿಯೇ!......

'ನಮಗೆ ಬೇಕಾದದ್ದು ಸಂತೋಷವಲ್ಲ, ಶಕ್ತಿ; ಇನ್ನೂ ಹೆಚ್ಚು ಶಕ್ತಿ!......

'ಎಲಾ ಬಂಧುವೇ, ನಿನ್ನ ವಿಚಾರ ಹಾಗೂ ಅನುಭೂತಿಗಳ ಹಿಂದೆ ಒಬ್ಬ ಶಕ್ತಿವಂತ ಪುರುಷನಿದ್ದಾನೆ; ಒಬ್ಬ ಅಜ್ಞಾತ ಜ್ಞಾನಿ ಯಿದ್ದಾನೆ. ಆತನ ಹೆಸರು ಆತ್ಮಾ. ನಿನ್ನ ದೇಹವೇ ಆತನ ದೇವಾ ಲಯ. ನಿನ್ನ ದೇಹವೂ ಆತನೇ!......

'ನಾನು ಏನು ಇರುವೆನೋ ಅದೇ ಆಗಲಿಕ್ಕೆಬೇಕು! ನಿನ್ನ ಅಂತರಾತ್ಮನು ನಿನಗೆ ಏನು ಹೇಳುತ್ತಿರುವನೆಂಬುದನ್ನು ಬಲ್ಲೆಯಾ? ಆತನು ಉಸುರುತ್ತಿದ್ದಾನೆ—ನೀನು ಏನು ಇರುವಿಯೋ ಅದೇ ಆಗೆಂದು!

'ನಾನು ನಿಮಗೆ ಅತಿಮಾನವ (ಸುಪರ್‌ಮನ್) ರಾಗಿರೆಂದು ಬೋಧಿಸುವೆ. ಮಾನವನು ತನ್ನನ್ನು ದಾಟಬೇಕು, ಇದಕ್ಕಾಗಿಯೇ ಮಾನವ-ಜನ್ಮ.......

‘(ಹೀಗೆಂದರೆ) ಇಂದ್ರಿಯಾ ವೇಗವನ್ನು ಕಿತ್ತಿಹಾಕಬೇಕೆಂದಲ್ಲ, ಇಷ್ಟೇ ಅಲ್ಲ–ಅವುಗಳನ್ನು ನಿರ್ವೀರ್ಯಗೊಳಿಸಬೇಕೆಂದು ಸಹ ಅಲ್ಲ. ಅವುಗಳನ್ನು ವಶದಲ್ಲಿಟ್ಟುಕೊಳ್ಳಬೇಕೆಂಬುದೇ ಆದರ್ಶ.

‘ಇಚ್ಛಾಶಕ್ತಿಯು ತನ್ನ ಪ್ರಭುತ್ವದ ವಿಷಯದಲ್ಲಿ ಎಷ್ಟು ಪ್ರಬುದ್ಧವಾಗುವದೋ ಇಂದ್ರಿಯಾವೇಗಕ್ಕೆ ಅಷ್ಟು ಸ್ವಾತಂತ್ರ್ಯವನ್ನು ಕೊಡಲಿಕ್ಕಾಗುವದು.

‘ನೀನು ಪ್ರಭು. ನೀನು ಅವುಗಳನ್ನು ಆಳುವವನು. ಅವು ನಿನ್ನನ್ನು ಆಳಕೂಡದು.

‘ನನಗೆ ಬೇಕಾದುದು ಜಗತ್ತು! ಹೇಗಿದೆಯೋ ಕೇವಲ ಅದು ಹಾಗೆಯೇ ನನಗೆ ಬೇಕು! ಅದು ನನಗೆ ಅಧಿಕಾಧಿಕವಾಗಿ ಬೇಕು; ಅನಂತಕಾಲಿಕವಾಗಿ ಬೇಕು! ಅದಕ್ಕೆಂತಲೇ ನಾನು ಅತೃಪ್ತಿಪೂರ್ವಕವಾಗಿ ಕೂಗಿಕೊಳ್ಳುತ್ತಿದ್ದೇನೆ–ಇನ್ನಿಷ್ಟು! ಇನ್ನಿಷ್ಟು!! ಎಂದು.’ *

ಈ ಗಂಭೀರ ಘೋಷವು ಶಕ್ತಿಮಂತ್ರದ ಆದಿ ದ್ರಷ್ಟಾರನಾದ ನೀಟ್ಸೆನ ರುದ್ರಮುಖದಿಂದ ಹೊರಟದ್ದೆಂಬುದನ್ನು ನಾವು ಲಕ್ಷ್ಯದಲ್ಲಿಡತಕ್ಕದ್ದು.

ಸುಮಾರು ಅದೇ ಕಾಲದಲ್ಲಿ ಅಮೇರಿಕಾಖಂಡದಲ್ಲಿ ಮೆಲ್ಲ ಮೆಲ್ಲನೆ ತಲೆಯೆತ್ತಿ ಇಂದಿಗೆ ಜಗತ್ತಿನ ಬಹುಜನರ ಚಿತ್ತವನ್ನು ತನ್ನೆಡೆಗೆ ಸೆಳೆದುಕೊಂಡ ‘**ಇಚ್ಛಾಶಕ್ತಿವಾದ**’ ಅಥವಾ ‘**ನವವಿಚಾರಾಂದೋಲನ**’ವೆಂಬುದು ನೀಟ್ಸೆ ಮೊದಲಾದವರ ಆಗಮನವನ್ನು ಸೂಚಿಸುವ ಗುಜುಗುಜು ಸುದ್ದಿಯಿದ್ದಂತೆ.

“In essence the life of God and the life of man are identically the same, and so are one..............The great central fact, in your life and in mine, is the coming into a conscious vital realisation of our oneness

* ಪಾಂಡಿಚೇರಿಯ ಶ್ರೀ ಅರವಿಂದ ಆಶ್ರಮದಲ್ಲಿರುವ ಶ್ರೀ ನಲಿನೀ ಬಾಬುಳ ‘ನೀಟ್ಸೇರ ಬಾಣೀ’ ಎಂಬ ವಂಗೀಯ ಗ್ರಂಥದಿಂದ.

with this infinite Life, and the opening of ourselves fully to this divine inflow.......... In the degree that we open ourselves to this divine inflow are we changed from mere men into Godmen." *

—*R. W. Trine*

'ದೇವನ ಜೀವವೂ, ಮಾನವನ ಜೀವನವೂ ಮೂಲತಃ ಕೇವಲ ಅದೇ ಆಗಿವೆ. ಮತ್ತು ಅವು ಒಂದೇ ಆಗಿವೆ......ನನ್ನ ಜೀವನದಲ್ಲಿ ಹಾಗೂ ನಿಮ್ಮ ಜೀವನದಲ್ಲಿ ಈ ಅನಂತ ಜೀವನದೊಂದಿಗೆ ನಾವು ನಮ್ಮ ಏಕತ್ವದ ಸಜ್ಞಾವಾದ ಸಮರ್ಥವಾದ ಅನುಭವಕ್ಕೆ ಬಂದು ಈ ದೈವೀ ಪ್ರವಾಹಕ್ಕೆ ನಮ್ಮನ್ನು ನಾವು ಸಂಪೂರ್ಣವಾಗಿ ತೆರೆದುಕೊಡುವುದು ಮಹತ್ತ್ವವಾದ ಒಂದು ಕೇಂದ್ರ ಸತ್ಯವಾಗಿದೆ....ನಾವು ಈ ದೈವೀ ಪ್ರವಾಹಕ್ಕೆ ನಮ್ಮನ್ನು ಎಷ್ಟು ಪ್ರಮಾಣದಿಂದ ತೆರೆದುಕೊಡುವೆವೋ ಅಷ್ಟು ಪ್ರಮಾಣದಲ್ಲಿ ನಾವು ಕೇವಲ ಮಾನವತ್ವಕ್ಕೆ ಪ್ರತಿಯಾಗಿ ದೇವಮಾನವರಾಗಿ ಮಾರ್ಪಡುವೆವು.' ಎಂದು ರಾಲ್ಫ್ ವಾಲ್ಡೋ ಟ್ರಾಯಿನ್ ಎಂಬ '**ನವವಿಚಾರ**' ವಾದಿಗಳು ತಮ್ಮ 'ಅನಂತದ ಸಮಸ್ವರದಲ್ಲಿ' ಎಂಬ ವಿಖ್ಯಾತ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ.

ನಿಮಗೆ ಶಕ್ತಿಬೇಕೇ? ಹಾಗಾದರೆ ನೀವು ಅನಂತದ ಶಕ್ತಿಗೆ ನಿಮ್ಮನ್ನು ನೀವು ತೆರೆದುಕೊಡಿರಿ. ಅಂದರೆ ಅದು ನಿಮಗೆ ಲಭಿಸುತ್ತದೆ. ನಿಮಗೆ ಜ್ಞಾನಬೇಕೇ? ಹಾಗಾದರೆ ಅನಂತದ ಜ್ಞಾನಕ್ಕೆ ನಿಮ್ಮನ್ನು ನೀವು ತೆರೆದುಕೊಡಿರಿ. ಅಂದರೆ ಅದು ನಿಮಗೆ ಪ್ರಾಪ್ತವಾಗುವದು. ಪ್ರೇಮಬೇಕೇ; ಹಾಗಿದ್ದರೆ ಅನಂತದ ಪ್ರೇಮಭಾಂಡಾರದ ಇದುರಿಗೆ ನಿಮ್ಮನ್ನು ನೀವು ತೆರೆದು ಇಡಿರಿ. ಅಂದರೆ ಅದು ನಿಮಗೆ ದೊರೆಯುತ್ತದೆ. ಆರೋಗ್ಯ, ಸಂಪತ್ತು, ಸಮೃದ್ಧಿ ನಿಮಗೆ

---

* *In tune with the infinite.*

—by R. W. Trine

ಇನ್ನೂ ಏನೇನು ಬೇಕಾದರೂ ನೀವು ಆ ಅನಂತದ ಮಹಾ ಜೀವನ ಮಹಾ ಸಮೃದ್ಧಿ ಇವುಗಳಿಗೆ ನಿಮ್ಮ ಹೃದಯ ಮತ್ತು ಬುದ್ಧಿಯ ಬಾಗಿಲನ್ನು ಮುಕ್ತದ್ವಾರಗೊಳಿಸಿರಿ. ಅಂದರೆ ಅವೆಲ್ಲ ನಿಮಗೆ ಅನಾಯಾಸವಾಗಿ ಲಭಿಸುವವು.

ಇದು ಅವರ ' ನವವಿಚಾರ 'ವಾದ.

ಇದರದೇ ಇನ್ನೊಂದು ಮಗ್ಗಲೂ ಉಂಟು. ಮತ್ತು ಜಗತ್ತಿನಲ್ಲಿ ಅದೇ ಬಹಳ ಸುಲಭ ಪದ್ಧತಿಯೆಂದು ' ನವವಿಚಾರ 'ವಾದಿಗಳಿಂದ ನಿರ್ಧರಿಸಲ್ಪಟ್ಟಿದೆ. ' ಸ್ವಯಂಸೂಚನಾ ಪದ್ಧತಿ ಯೆಂದು ಅದರ ಹೆಸರು.

ನಮ್ಮೊಳಗೊಂದು ಅಘಟಿತಶಕ್ತಿಯಿದ್ದು ಅದಕ್ಕೆ ಅಶಕ್ಯವಾದದ್ದು ಏನೂ ಇಲ್ಲ. ಅದೇ ಇಚ್ಛಾಶಕ್ತಿ ಸುಪ್ತವಾಗಿ ಇದು ಎಲ್ಲರಲ್ಲಿಯೂ ಇದ್ದೇ ಇದೆಯಾದರೂ ಸಾಧನೆಯಿಂದ ಇದನ್ನು ಅರಳಿಸಿಕೊಂಡವರಲ್ಲಿ ಮಾತ್ರ ಕಾರ್ಯಕಾರಿಯಾಗುತ್ತದೆ. ಇದಕ್ಕೆ ವಿಶ್ವಾಸ, ದೃಢಸಂಕಲ್ಪ, ತಾಳ್ಮೆ, ನಿರಂತರ ಪರಿಶ್ರಮ, ಇಂದ್ರಿಯ ನಿಗ್ರಹ, ಆತ್ಮಸಂಯಮನ ಮೊದಲಾದವು ಅತ್ಯಾವಶ್ಯಕ.

ಮೊಟ್ಟಮೊದಲಿಗೆ—' ನನ್ನೊಳಗೆ ಇಚ್ಛಾಶಕ್ತಿಯೆಂಬ ಅಘಟಿತ ವಸ್ತುವೊಂದಿದೆ. ಅದಕ್ಕೆ ಯಾವುದೂ ಅಸಾಧ್ಯವಿಲ್ಲ. ' ಎಂಬ ವಾಕ್ಯವನ್ನು ಕೆಲವು ವಾರಗಳ ವರೆಗೆ ಸತತ ಮನನ ಮಾಡುತ್ತಲಿದ್ದರೆ ಒಳಗೆ ಒಂದು ಬಗೆಯ ಉತ್ಸಾಹವು ಒಡಮೂಡುವುದಂತೆ. ಬಳಿಕ ಆ ಶಿಶುಸದೃಶವಾದ ನವಶಕ್ತಿಯನ್ನು ಅದೇ ಮನನದೊಂದಿಗೆ ತೀರ ಕ್ಷುಲ್ಲಕವಾದ ಚಿಕ್ಕಪುಟ್ಟ ಕೆಲಸಗಳಲ್ಲಿ ಬಳಿಸಿಕೊಳ್ಳಬೇಕಂತೆ. ಹಾಗೇ ಮುಂದೆ ಮುಂದೆ ಹೆಚ್ಚು ವೇಳೆಯೂ ಶ್ರಮವು ಬೇಕಾಗುವ ಕೆಲಸಗಳನ್ನು ಆರಿಸಿಕೊಂಡು ಅದೇ ಭಾವನೆಯೊಂದಿಗೆ ಮಾಡತೊಡಗಬೇಕು. ಇದರಿಂದ ಆತ್ಮವಿಶ್ವಾಸವು ದಿನದಿನಕ್ಕೆ ಬೆಳೆದು ಬರುವದು.

ತನ್ನೊಳಗಿನ ' **ಇಚ್ಛಾಶಕ್ತಿ** 'ಯೆಂಬುದರ ಬಗೆಗೆ ಹೀಗೊಮ್ಮೆ ನಿಶ್ಚಿತ ಪ್ರತೀತಿಯುಂಟಾದ ಬಳಿಕ ತನ್ನ ಮಾನಸಿಕ ಹಾಗೂ ದೈಹಿಕ

ವಿಕಾರಗಳನ್ನು ಹೊಡೆದೋಡಿಸುವುದಕ್ಕೆ ಅದನ್ನು ಪ್ರಯೋಗಿಸ ಬೇಕಂತೆ. ತನ್ನ ಅವಗುಣಗಳನ್ನು ಒಂದೊಂದಾಗಿ ಆರಿಸಿಕೊಂಡು— 'ನನ್ನ ಪ್ರಖರವಾದ ಇಚ್ಛಾಶಕ್ತಿಯ ಸಹಾಯದಿಂದ ಇದನ್ನು ನಿವಾರಿಸಿಕೊಳ್ಳುತ್ತೇನೆ. ಈ ಅವಗುಣಕ್ಕೆ ನನ್ನೊಳಗಿಂದ ಹೊರಟು ಹೋಗೆಂದು ಆಜ್ಞಾಪಿಸುತ್ತೇನೆ.' ಎಂದು ಕೆಲವು ವಾರಗಳ ವರೆಗೆ ಆತ್ಮವಿಶ್ವಾಸದೊಂದಿಗೆ ಪ್ರಯತ್ನಿಸಬೇಕಂತೆ.

ಹೀಗೆ ಆತ್ಮಸಂಯಮನವನ್ನೂ, ದೈಹಿಕ ಆರೋಗ್ಯವನ್ನೂ ಗಳಿಸಿದ ಮೇಲೆ ಇಚ್ಛಾಶಕ್ತಿಯು ಸಂಸಾರದ ಬಾಹ್ಯಕಕಾರ್ಯಗಳಿಗೆ ಉಪಯೋಗಿಸಲರ್ಹವಾಗುವದಂತೆ. 'ನನ್ನ ವಾರ್ಷಿಕ ಉತ್ಪನ್ನವು ಇಂತಿಷ್ಟು ಇದೆ. ಅದು ಇಂತಿಷ್ಟು ಹೆಚ್ಚಾಗಬೇಕು.' ಎಂದು ಆತನು ಅಪೇಕ್ಷಿಸಿದರೆ ತನ್ನ ಇಚ್ಛಾಶಕ್ತಿಯನ್ನು ಹೇಗೆ ಪ್ರಯೋಗಿಸಬೇಕೆಂದರೆ– 'ನನ್ನಲ್ಲಿ ಈಗ ಇಂತಿಷ್ಟು ಗಳಿಸುವ ಯೋಗ್ಯತೆಯಿದೆ. ಆದರೆ ಈ ಯೋಗ್ಯತೆಯನ್ನು ನಾನು ಇನ್ನೂ ಇಂತಿಷ್ಟು ಬೆಳೆಯಿಸಿಕೊಳ್ಳಬಲ್ಲೆನು. ಯಾಕೆಂದರೆ ನನ್ನ ಇಚ್ಛಾಶಕ್ತಿಯು ಪ್ರಖರವಾಗಿ ಇದೆ.' ಎಂದು ಮುಂತಾಗಿ ಸತತ ಅನುಸಂಧಾನ ಮಾಡುತ್ತ, ವ್ಯವಸಾಯವನ್ನು ಸುಧಾರಿಸುವ ಎತ್ತುಗಡೆಯನ್ನು ಸಾವಧಾನವಾಗಿ ಮಾಡತೊಡಗ ಬೇಕಂತೆ.

ಇಚ್ಛಾಶಕ್ತಿಯು ಇಷ್ಟು ಬೆಳೆದ ಬಳಿಕ ಅದನ್ನು ತನ್ನ ಚಿತ್ತದ ಏಕಾಗ್ರತೆಯನ್ನು ಸಾಧಿಸುವುದರ ಕಡೆಗೆ ಹೊರಳಿಸಬೇಕಂತೆ. 'ನಾನು ಇಂತಿಷ್ಟು ಮಿನೀಟುಗಳವರೆಗೆ ನನ್ನ ಚಿತ್ತವನ್ನು ಒಂದೇ ವಿಚಾರ ಇಲ್ಲವೆ ಕಲ್ಪನೆಯ ಮೇಲೆ ನಿಲ್ಲಿಸುತ್ತೇನೆ. ಇದು ನನಗೆ ಅಶಕ್ಯವಲ್ಲ. ಯಾಕೆಂದರೆ ನನ್ನ ಇಚ್ಛಾಶಕ್ತಿಯು ಪ್ರಖರವಿದೆ.'

ಇದು ಸಾಧಿಸಿದ ಬಳಿಕ ದೂರದಲ್ಲಿರುವ ಮಿತ್ರರನ್ನು ಕರೆಯಿಸಿ ಕೊಳ್ಳುವ ಮೊದಲಾದ ಕೆಲಸಗಳು ಸಾಧ್ಯವಾಗುವವಂತೆ. ಆ ಮಿತ್ರನ ಮೂರ್ತಿಯನ್ನು ಕಣ್ಣಮುಂದೆ ಕಲ್ಪಿಸಿ 'ಅಯ್ಯಾ ಮಿತ್ರನೇ, ನಿನ್ನನ್ನು

ಕಾಣಬಯಸುತ್ತೇನೆ. ಆದ್ದರಿಂದ ಬಾ' ಎಂದು ಮೇಲಿಂದ ಮೇಲೆ ಆಜ್ಞಾಪಿಸಬೇಕಂತೆ.

ಇಚ್ಛಾಶಕ್ತಿಯು ಇಷ್ಟು ಕಾರ್ಯಕಾರಿಯಾದ ಬಳಿಕ ಗಾಳಿ ಮಳೆ ಮೊದಲಾದ ಜಡಸೃಷ್ಟಿಯ ಕಾರ್ಯಗಳ ಮೇಲೆ ಅದನ್ನು ಪ್ರಯೋಗಿಸಬಹುದಂತೆ. ಅಥವಾ ಸಾಂಸಾರಿಕ ಪ್ರವೃತ್ತಿಗಳನ್ನು ತಡೆದು ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸುವ ಕಾರ್ಯಕ್ಕೆ ಈ ಶಕ್ತಿಯನ್ನು ಪ್ರಯೋಗಿಸಿಕೊಳ್ಳಬಹುದಂತೆ.

ಇಚ್ಛಾಶಕ್ತಿಯ ಈ ಪದ್ಧತಿಗೆ ಸ್ವಯಂಶಾಸನ ಪದ್ಧತಿ ಅಥವಾ 'ಆಟೋ–ಸಜೆಸ್ಟಿವ್–ಮೆಥೆಡ್' ಎಂದೆನ್ನುವರು. *

ಆದರೆ ಮೊದಲನೆಯದಾದ 'ಅನಂತದೊಂದಿಗೆ ಸಮಸ್ವರದಲ್ಲಿ' ಎಂಬ ಪದ್ಧತಿಯಲ್ಲಿ ಮುಖ್ಯವಾದದ್ದು '**ತೆರೆದಿಡುವುದು**' ಅಥವಾ 'ಓಪನ್‌ನೆಸ್.' ಅಂದರೆ ನಮ್ಮ ಹೃದಯಬುದ್ಧಿಗಳಲ್ಲಿ ಯಾವಾಗಲೂ ಅನಂತವೂ ನಾವೂ ಏಕಜೀವನದಿಂದ ಯುಕ್ತರಾಗಿದ್ದೇವೆ ಎಂಬ ಪ್ರತೀತಿಯು ಪ್ರವಹಿಸುತ್ತಿರಬೇಕು. ಹೃದಯ ಬುದ್ಧಿಗಳು ಯಾವಾಗಲೂ ಈ ಅನುಭೂತಿಯನ್ನು ಸ್ವೀಕರಿಸುವುದಕ್ಕೆ ಸಿದ್ಧವಾಗಿರಬೇಕಾದುದು ಪ್ರಥಮ ಅಗತ್ಯ. ಆ ಮೇಲೆ ಈ ವಿಷಯದಲ್ಲಿ ಜಾಜ್ವಲ್ಯವಾದ ಮತ್ತು ಯಥಾರ್ಥವಾದ ಅಪೇಕ್ಷೆಯಿರಬೇಕಾದದು ಇನ್ನೊಂದು ಮಾತು.

ಮೊದಮೊದಲಿಗೆ ದಿನಾಲು ಕೆಲಹೊತ್ತು ಏಕಾಂತವನ್ನು ಸಾಧಿಸಿಕೊಂಡು ಅಲ್ಲಿ ಮೇಲ್ಕಾಣಿಸಿದ ತತ್ತ್ವವನ್ನು ಕುರಿತು ಚಿಂತನೆಯನ್ನು ಮಾಡುತ್ತಲಿದ್ದರೆ ಹೆಚ್ಚು ಸಹಾಯವಾಗುವದು. ಏಕಾಂತದಲ್ಲಿ ದೇವನೊಬ್ಬನ ಹೊರತು ಇನ್ನಾರೂ ನಮ್ಮ ಇದುರಿಗೆ ಇಲ್ಲವೆಂಬುದನ್ನು ಸ್ಮರಿಸಿಕೊಂಡು ನಮ್ಮ ಹೊರಗಿರುವಂತೆ ಒಳಗೂ ಆತನ ದಿವ್ಯರಾಜ್ಯವಿದೆಯೆಂದು ಭಾವಿಸುತ್ತ ಸ್ತಬ್ಧಚಿತ್ತನಾಗಿರುವುದನ್ನು ಅಭ್ಯಾಸ ಮಾಡಬೇಕು. ಇದರಿಂದ ನಮ್ಮ ವ್ಯವಸನಗಳಲ್ಲೆಲ್ಲ ಒಂದು ಬಗೆಯ

---

* ಪ್ರೋಫೆಸರ್ ಶ್ರೀ ರಾಜೇಂದ್ರನಾಥ ರುದ್ರರು ಬರೆದ 'ಇಚ್ಛಾಶಕ್ತಿ'ಯೆಂಬ ವಂಗೀಯ ಗ್ರಂಥದಿಂದ.

ಸಾಮರಸ್ಯವು ಪ್ರತೀತಿಗೆ ಬರುವದು. ಹೀಗೆಯೆ ಕೆಲಕಾಲ ಮಾಡುತ್ತಿದ್ದರೆ ಮುಂದೆ ಬಹಿರಂಗದಲ್ಲಿ ಜೀವನ ಸಂಗ್ರಾಮದೊಳಗೆ ಸಹ ಅದೇ ಆಂತರಿಕ ಸಾಮರಸ್ಯವು ಸ್ಥಿರವಾಗಿ ಉಳಿಯುವದು. ಆಗ ಅನಂತ ಜೀವನ, ಶಾಂತಿ, ಶಕ್ತಿ, ಸಮೃದ್ಧಿ, ಪ್ರೇಮ, ಜ್ಞಾನ ಮೊದಲಾದವುಗಳೆಲ್ಲ ನಮ್ಮ ಒಳಗೂ ಹೊರಗೂ ಕೂಡಿಯೇ ಅನುಭವಕ್ಕೆ ಬರುವವು.

ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಾಯೋಗಿಕ ಮಾನಸಶಾಸ್ತ್ರದ ಸಂಶೋಧನವು ಹೆಚ್ಚಾಗಿ ನಡೆದದ್ದರಿಂದ ಹಾಗೂ ಜನತೆಯಲ್ಲಿ ಅಜ್ಞಾನ ಅಶಕ್ತತೆಗಳ ದುಷ್ಪರಿಣಾಮವು ಹೆಚ್ಚಾಗಿ ಕಂಡು ಬಂದದ್ದರಿಂದ ಹೀಗೆ ಎಲ್ಲೆಡೆಯಲ್ಲಿ ಶಕ್ತಿವಿಚಾರವನ್ನು ಕುರಿತು ಚರ್ಚೆಗೆ ಆರಂಭವಾಗಿ ಅಲ್ಲಲ್ಲಿ ಅಂಥಿಂಥ ಉಪಾಯಗಳು ಕಂಡು ಹಿಡಿಯಲ್ಪಟ್ಟವು. ಇವುಗಳೆಲ್ಲಾ ಏಕಾಗ್ರವಿಚಾರದ ಪರಿಣಾಮಸ್ವರೂಪವಾಗಿ ಜನ್ಮತಾಳಿದವೆಂದು ಹೇಳಬಹುದು. ಒಂದಾನೊಂದು ಪ್ರಯೋಜನದ ಸಲುವಾಗಿ ಒಂದೇ ಸಮನೆ ಬುದ್ಧಿಯನ್ನು ದುಡಿಸುತ್ತಿದ್ದರೆ ಕೊನೆಗೆ ಆ ಬುದ್ಧಿಗೆ ಅಗಾಧ ತತ್ವಗಳು ಕೆಲವೊಂದು ಪರಿಮಾಣದಲ್ಲಾದರೂ ಹೊಳೆಯದಿರಲಾರವೆಂಬುದಕ್ಕೆ ಜಗತ್ತಿನಲ್ಲಿ ಎಷ್ಟೋ ನಿದರ್ಶನಗಳಿವೆ. ಏನೂ ಗೊತ್ತಿಲ್ಲದ ಪುರಾತನ ಲಿಪಿಗಳನ್ನೂ ಭಾಷೆಗಳನ್ನೂ ತಿಳಿದುಕೊಳ್ಳುವ ಪದ್ಧತಿಗಳನ್ನು ಇದೇ ರೀತಿಯಿಂದ ಹುಡುಕಿರುವರೆಂಬುದು ಸರ್ವಶ್ರುತ.

ಇವೇ ಮಾತುಗಳು ಮುಂದೆ ಯೋಗಿಗಳ ಕೈಯ್ಯಲ್ಲಿ ಬಂದವೆಂದರೆ ಅವರು ಮುಂಚಿನ ಶೋಧಗಳ ಸತ್ಯತೆಯನ್ನು ಪ್ರಮಾಣೀಕರಿಸುವರಲ್ಲದೆ ಅವುಗಳೊಳಗಿನ ನ್ಯೂನತೆಗಳನ್ನು ನಿವಾರಿಸುವರು. ಅಯರ್ಲಂಡಿನ ದ್ರಷ್ಟಾಪುರುಷರೂ ಅನುಭಾವಕವಿಗಳೂ ಆದ ದಿವಂಗತ '**ಏ. ಈ**' (ಜಾರ್ಜ್ ರಸೆಲ್) ಅವರ '**ದರ್ಶನದೀಪ**' (ಕ್ಯಾಂಡಲ್ ಆಫ್ ವ್ಹಿಜನ್) ಎಂಬ ಗ್ರಂಥದಲ್ಲಿ ಶಕ್ತಿಯ ಯೋಗಗಮ್ಯ ಅನುಭವಗಳನ್ನು ಕುರಿತು ಹೇಳಿದ್ದೇನಂದರೆ—

'ವಾಙ್ಮಯದಲ್ಲಿ ಮನೋವೃತ್ತಿ ಮತ್ತು ವಿಚಾರ ಇವುಗಳ ಬಗೆಗೆ ಅಪರಂಪಾರವಾದ ಅನುಶೀಲನವು ಕಂಡು ಬರುತ್ತಿದೆಯಾದರೂ,

ಪಡೆಗಟ್ಟಿದ ವಿಚಾರಗಳು ಮೆದುಳಿನಲ್ಲಿ ಜಿಗಿದಾಡುವಂತೆ ಯಾವನೊಬ್ಬನು ತನ್ನ ದೇಹದಲ್ಲಿ ಶಕ್ತಿಗಳು ಚೆಲ್ಲಾಟವಾಡುತ್ತಿರುವುದನ್ನು ಅನುಭವಿಸಿದ ಬಗೆಗೆ ಬರೆದ ಒಂದು ಲೇಖನವನ್ನೂ ಕೂಡ ನಾವು ಕಾಣುವುದು ಅಪರೂಪವಾಗಿದೆ. ನಮ್ಮ ದೇಹಮಂದಿರದಲ್ಲಿ ವಾಸಿಸುತ್ತಿವೆಯೆಂದೂ, ಮಜ್ಜಾತಂತುಮಂಡಲಗಳಲ್ಲಿ ಅಥವಾ ಚಕ್ರಗಳಲ್ಲಿ ಅವಿತುಕೊಂಡು ಕುಳಿತಿವೆಯೆಂದೂ ಪ್ರಾಚೀನರು ವರ್ಣಿಸಿದ ಶಕ್ತಿಗಳ ಹೊಂದಿಕೆಯನ್ನು ನಾನು ಒಪ್ಪಿಕೊಳ್ಳಲಸಮರ್ಥನಾಗಿದ್ದೆನು. ಅವುಗಳ ಕ್ರಿಯೆಗಳನ್ನು ನಿರ್ಧರಿಸುವುದೂ ನನಗೆ ಹಾಗೇ ತೋರುತ್ತಿದ್ದಿತು. ಆದರೆ **ವಿಕಾಗ್ರತೆ** ಮತ್ತು **ಸಂಕಲ್ಪ ಪ್ರಭುತ್ವ** ಇವುಗಳನ್ನು ಕುರಿತು ದೀರ್ಘ ಪ್ರಯತ್ನ ಮಾಡಿದ ಬಳಿಕ ನನ್ನೊಳಗೆ **ಪಾವನ ಅಗ್ನಿಗಳ** ಜಾಗೃತಿಗೆ ಮೊದಲಾದುದನ್ನು ನಾನು ಅನುಭವಿಸಹತ್ತಿದೆನು. ಮತ್ತು ಕಾಲ ಕ್ರಮದಲ್ಲಿ ಈ ಶಕ್ತಿಗಳಿಗೂ ಮಾನಸದೇಹದೊಳಗಿನ ಕೇಂದ್ರಗಳಿಗೂ ಇರುವ ಸಂಬಂಧವು ಅಂಶಮಾತ್ರವಾಗಿ ಗೋಚರಿಸಹತ್ತಿತು. ನಾನು ಅವುಗಳನ್ನು ನನ್ನೊಳಗೆ ಅನುಭವಿಸುತ್ತಲಿದ್ದುದಿಷ್ಟೇ ಅಲ್ಲ, ಕೆಲಕೆಲವು ಸಾರೆ ನನ್ನಂತೆ ಈ ಜ್ಞಾನದ ಸಂಶೋಧನವನ್ನು ನಡೆಯಿಸಿದವರಲ್ಲಿ ಸಹ ಅವುಗಳ ಕಂಪನಗಳನ್ನಾಗಲಿ, ಪ್ರಕಾಶಗಳನ್ನಾಗಲಿ ಕಣ್ಣಾರೆ ಕಾಣುತ್ತಲೂ ಇದ್ದೆನು. ಅದು ಹೇಗೆಂದರೆ—ಶಕ್ತಿವಂತ ಪುರುಷರ ಮಸ್ತಕದ ಇಲ್ಲವೆ ಹೃದಯದ ಸುತ್ತುಮುತ್ತಲೆಲ್ಲ ಪ್ರಕಾಶವು ಚಿಮ್ಮುತ್ತಿರುವುದಾಗಿ ತೋರುತ್ತಿತ್ತು. ಒಳಗಿನ ಸೆಲೆಯಿಂದ ಜಿಗಿದು ಬರುವ ಅಗ್ನಿಯ ಗರಿಗಳು ಅವರ ತಲೆಯ ಮೇಲೆ ನೆಗೆಯುತ್ತಿದ್ದವು. ಮತ್ತು ಬೆಂಕಿಯ ರೆಕ್ಕೆಗಳಂತೆಯೂ, ಉರಿಯಗರಿಗಳಂತೆಯೂ, ಶೇಷನ ಫಣಿಗಳಂತೆಯೂ ಇರುವ ಬಣ್ಣಬಣ್ಣದ ದೃಶ್ಯಗಳು ಕಂಗೊಳಿಸುತ್ತಿದ್ದವು. ಒಮ್ಮೆ ಧ್ಯಾನದ ಕಡುತರವಾದ ಪರಮೋಚ್ಚ ಸ್ಥಿತಿಯಲ್ಲಿ ಆ ಪುರಾತನೋಲ್ಲಿಖಿತ ಅಗ್ನಿಯು ನನ್ನೊಳಗೆ ಎದ್ದಿತು. ಅದು ನನ್ನ ಬೆನ್ನಹುರಿಗುಂಟ ಮಿಂಚಿನಂತೆ ಚಮುಕಿಸಿತು. ಆದರ ಶಕ್ತಿಗೆ ನನ್ನ ದೇಹವು ಅಲ್ಲಾಡಿತು. ನಾನೊಂದು ಜ್ವಾಲೆಯ ಝುರಿಯಲ್ಲಿ ನಿಂತಂತೆ ನನಗೆ ತೋರಿತು. ನನ್ನ ತಲೆಯು

ಸುತ್ತುಮುತ್ತು ರೇಕ್ಕೆಗಳಂತೆ ಅಗ್ನಿಮಯವಾದ ಚಿಮುಕುಗಳು ಕಂಗೊಳಿಸುತ್ತಿದ್ದವು. ಅವುಗಳಿಗೆ ಅಸಮಾನವಲ್ಲದ ಸಮತಾಲದ ನಾದಗಳು ಆ ಪ್ರತಿಯೊಂದು ಚಿಮುಕಿನೊಂದಿಗೆ ಏಳುತ್ತಿದ್ದವು.'

ಪುರಾತನ ಯೋಗ ಗ್ರಂಥಗಳಲ್ಲಿ ಇದಕ್ಕೇ ಕುಂಡಲಿನೀಶಕ್ತಿಯೆಂದೂ, ಧ್ಯಾನಸಾಮರ್ಥ್ಯವೆಂದೂ, ಯೋಗಶಕ್ತಿಯೆಂದೂ ಹೇಳಲಾಗಿದೆ. 'ಪಶ್ಚಿಮ ಪದ್ಮಾಸನದಲ್ಲಿ ಕುಳ್ಳಿತ್ತು, ತುಟಿ ಮಿಡುಕದೆ, ಎವೆಹಳಚದೆ, ಬಿಟ್ಟಕಣ್ಣು, ಬಿಗಿದಹುಬ್ಬು, ಬ್ರಹ್ಮರಂಧ್ರದಲ್ಲಿ ಕಟ್ಟಿತು ಗುಡಿ, **ನಟ್ಟೆಲುವು ಮುರಿದು ಅಟ್ಟಿ ಆಲ್ಲಾಡಿತಲ್ಲಾ!**' ಎಂದು ಶ್ರೀ ಬಸವಣ್ಣನವರೂ 'ಏ. ಈ.'ಯವರಂತೆ ತಮ್ಮ ಧ್ಯಾನದ ಕಡುತರ ಪರಮೋಚ್ಚಾವಸ್ಥೆಯಲ್ಲಿ ಬೆನ್ನೆಲುಬಿನಗುಂಟ ಶಕ್ತಿಪ್ರವಾಹವು ಹೊರಟು ದೇಹವನ್ನು ಅಲ್ಲಾಡಿಸಿಬಿಟ್ಟಿತೆಂದು ಹೇಳಿದ್ದಾರೆ. ಯೋಗ ಭೋಗಗಳ ಕೈತಾಳಗಳನ್ನು ಕ್ರಮವರಿತು ಬಾರಿಸಿದ ರತ್ನಾಕರಸಿದ್ಧನಿಗೂ ಧ್ಯಾನಸಾಮರ್ಥ್ಯದ ಅನುಭವವು ಇದೇ ಬಗೆಯದಾಗಿ ಬಂದಿದ್ದಿತೆಂಬುದನ್ನು ಆತನ ಮಹಾಕಾವ್ಯದಲ್ಲಿ ನೋಡಬಹುದು:— "ಪೆಂಪಿನ ಧ್ಯಾನದೊಳಾ ತಪೋಧನನಿರೆ। **ಕಂಪಿಸಿತೊಡನೆ ಮೂಲೋಕಾ** ॥ ಪಿಡುಕಲೀಯದೆ ಮನವನು ತಡೆದಾತ್ಮನೊ। ಳಡಗಿಸಿ ನಿಷ್ಕಂಪನಾಗಿ॥ ಕಡುಗಲಿನಿಂದ **ಹಂಸಧ್ಯಾನ ನಿಷ್ಠೆಗೆ । ನಡುಗದಿಹುದೆ ಮೂರುಲೋಕಾ ॥ ತೀಡಿದ ಗಾಳಿಗೆ ಚಪ್ಪರ ಲತೆಗಳ। ಲ್ಲಾಡುವಂತಲುಗಿತು ಭೂಮಿ ॥** ನಾಡು ಬೇಡಚ್ಚರಿವಟ್ಟುದೇನೆಂದು ಕೊಂ। ಡಾಡಲಾ **ಧ್ಯಾನಶಕ್ತಿಯನು!!**" (ಭರತೇಶ ವೈಭವ-ಧ್ಯಾನ ಸಾಮರ್ಥ್ಯ ಸಂಧಿ)

ರತ್ನಾಕರಸಿದ್ಧನಿಗೆ ಅಟ್ಟಿ ಅಲ್ಲಾಡಿದಂತೆ ಕಾಣಿಸದೆ ಸೃಷ್ಟಿ ಅಲ್ಲಾಡಿದಂತೆ ತೋರಿದೆಯಾದರೂ ಮೂಲ ಅನುಭೂತಿಯು ಎರಡರೊಳಗೂ ಒಂದೇ ಆದರೆ ಅದರ ಬಗೆಗೆ ಸಂವೇದನೆ ಮಾತ್ರ ಬೇರೆ. ಜೈನರು ಈ ಸ್ಥಿತಿಗೆ "ಜಂಪಾಪಾತ" ವೆಂದು ಹೇಳಿದ್ದಾರೆ; ಶೈವರು ಇದಕ್ಕೇ "ಶಕ್ತಿಪಾತ" ವೆಂದು ಹೇಳುವಹಾಗೆ ತೋರುತ್ತದೆ.

ದಿವಂಗತ ಸರ್ ಜಗದೀಶಚಂದ್ರ ಬೋಸರು ಭೌತಿಕ ಪ್ರಯೋಗಗಳಿಂದ ಒಂದೇಸವನೆ ಇಪ್ಪತ್ತು ವರುಷ ಪರೀಕ್ಷಿಸಿ ಪ್ರಾಣಿಗಳ ಹಾಗೂ ವನಸ್ಪತಿಗಳ ಆಂತರಿಕ ಸ್ವಯಂಶಕ್ತಿಯನ್ನು ಕುರಿತು ಕಂಡುಹಿಡಿದ ಅಗಾಧ ಸಿದ್ಧಾಂತವನ್ನು ಕುರಿತು ಆಲೋಚಿಸಿದರೆ ನಮಗೆ ವಿಸ್ಮಯವಾಗದಿರದು. ಅವರ "ಅವ್ಯಕ್ತ" ವೆಂಬ ಪ್ರಬಂಧೋಪನ್ಯಾಸ ಸಂಗ್ರಹದಲ್ಲಿ ಈ ಬಗೆಗೆ ಹೀಗೆ ಉಲ್ಲೇಖಿಸಲ್ಪಟ್ಟಿದೆ:—

"(ಪ್ರಾಣಿ ಹಾಗೂ ವನಸ್ಪತಿಗಳ) ಸ್ವತಃಸ್ಪಂದನವು ಒಳಗಿನ ಯಾವುದೋ ಒಂದು ಅಜ್ಞಾತಶಕ್ತಿಯಿಂದ ಘಟಿಸುತ್ತದೆ. ನಮ್ಮ ಹೃದಯದ ಚಲನವಲನವು ಇದರದೇ ಒಂದು ದೃಷ್ಟಾಂತವಾಗಿದೆ. ಇದು ತನ್ನಿಂದ ತಾನೇ ಆಗುತ್ತಿರುತ್ತದೆ. ವನಸ್ಪತಿಗಳ ರಾಜ್ಯದಲ್ಲಿಯೂ ಇದರ ಉದಾಹರಣೆಗಳನ್ನು ಕಾಣಬಲ್ಲೆವು. 'ಬನಚಾರಾಲ' ದ ಚಿಕ್ಕ ಎಲೆಗಳೆರಡೂ ತಮ್ಮಿಂದ ತಾವೇ ಅಗಳಾಡುವವು. ಒಳಗಿನ ಶಕ್ತಿಯಿಂದ ಹುಟ್ಟುವ ಈ ಸ್ವತಃಸ್ಪಂದನದಲ್ಲಿರುವ ಒಂದು ವಿಶೇಷತ್ವವೇನೆಂದರೆ ಇದು ಹೊರಗಿನ ಶಕ್ತಿಯಿಂದ ವಿಚಲಿತವಾಗುವದಿಲ್ಲ; ತಿರುಗಿ ಕೇಳಿದರೆ ಬಾಹ್ಯಿಕ ಶಕ್ತಿಗೇ ಇದು ತಡೆಯನ್ನುಂಟುಮಾಡುತ್ತದೆ. ಒಟ್ಟಾರೆ ನಮಗೆ ಇದರಿಂದ ಕಂಡುಬರುವದೇನೆಂದರೆ— ಎರಡು ಶಕ್ತಿಗಳಿಂದ ಜೀವವು ಉತ್ತೇಜಿತವಾಗುತ್ತದೆ; ಒಂದು ಹೊರಶಕ್ತಿ, ಇನ್ನೊಂದು ಒಳಶಕ್ತಿ. ಇವೆರಡರಲ್ಲಿ ಒಳಶಕ್ತಿಯು ಯಾವಾಗಲೂ ಹೊರಶಕ್ತಿಯನ್ನು ಪ್ರತಿಬಂಧಿಸುತ್ತಿರುತ್ತದೆ. .. .. .. .. ..

"ಒಮ್ಮೊಮ್ಮೆ ಮನದ ವಿಕ್ಷಿಪ್ತ ಅವಸ್ಥೆಯಲ್ಲಿ ಯಾವುದು ನಮಗೆ ಕಾಣಿಸುವದಿಲ್ಲವೋ ಹಾಗೂ ಕೇಳಿಸುವದಿಲ್ಲವೋ ಚಿತ್ತ ಸಂಯಮದಿಂದ ಅದು ಕಾಣಿಸುವದುಂಟು, ಕೇಳಿಸುವದುಂಟು. ಇದರಿಂದ ಅನಿಸುವುದೇನೆಂದರೆ, ಇಚ್ಛಾನುಕ್ರಮದಿಂದಲೂ ಬಹುಕಾಲದ ಅಭ್ಯಾಸ ಬಲದಿಂದಲೂ ಅನುಭೂತಿಶಕ್ತಿಯನ್ನು ವೃದ್ಧಿಂಗತಗೊಳಿಸಲಿಕ್ಕೆ ಬರುವದು. .. .. .. .. .. ..

"ಕುಮಾಯೂನದಲ್ಲಿದ್ದಾಗ ಒಂದು ಘಟನೆಯು ನಡೆಯಿತು.

ಕಾಡಿನೊಳಗಿಂದ ಒಂದು ಹುಲಿಯು ಹೊರಬಿದ್ದು ಸ್ವಲ್ಪದಿನಗಳಲ್ಲಿಯೇ ನೂರಾರು ಜನರನ್ನು ಗಾಸಿಗೊಳಿಸಿತು. ಸರಕಾರದವರೂ ಎಷ್ಟೋ ಪ್ರಯತ್ನಮಾಡಿದರು. ಏನೂ ಉಪಯೋಗವಾಗಲಿಲ್ಲ. ಅದೇ ಊರಲ್ಲಿ ಕಾಲೂಸಿಂಹನೆಂಬೊಬ್ಬ ಬೇಟೆಗಾರನಿದ್ದನು. ಅವನು ಬೇಟೆಯಾಡುವು ದನ್ನು ಬಿಟ್ಟು ಎಷ್ಟೋಕಾಲವಾಗಿದ್ದಿತು. ಆದರೂ ಗ್ರಾಮವಾಸಿ ಗಳೆಲ್ಲರೂ ಬಹಳೇ ಜೆಲ್ಲವರಿದದ್ದರಿಂದ ಅವನು ತನ್ನ ಹಳೇ ತುಬಾಕಿ ಯನ್ನು ತೆಗೆದುಕೊಂಡು ಹುಲಿಬೇಟೆಗೆ ಹೋಗಿ ಒಂದೆಡೆ ಅವಿತು ಕೊಂಡು ಕುಳಿತನು. ಹುಲಿಯು ಬಂತು. ಇವನಿಗೂ ಅದಕ್ಕೂ ಆರೇ ಮೊಳದ ಅಂತರ! ಕಾಲೂಸಿಂಹನು ಭಯದಿಂದ ಕಂಪಿಸತೊಡಗಿದನು. ಏನು ಮಾಡಿದರೂ ತುಬಾಕಿಯನ್ನು ಸರಿಯಾಗಿ ಹಿಡಿಯಲಿಕ್ಕೇ ಆಗ ಲೊಲ್ಲದು. ಆಗ ಏನೇನು ನಡೆಯಿತೆಂಬುವನ್ನು ನಾನು ಕಾಲೂಸಿಂಹನ ಬಾಯಿಯಿಂದಲೇ ಕೇಳಿದ್ದೇನೆ. ಅವನು ಹೇಳಿದ್ದೇನೆಂದರೆ— "ಆಗ ನಾನೇ ನನಗೆ ಒಳಿತಾಗಿ ಸಿಟ್ಟುಮಾಡಿ ಗದರಿಸಿ ಹೇಳಿದೆನು— ಏನಿದು ಕಾಲೂಸಿಂಹ್? ಚಿಕ್ಕಮಕ್ಕಳನ್ನೂ ದಿಕ್ಕಿಲ್ಲದ ಬಾಲೆಯರನ್ನೂ ಉಳಿ ಸುವುದಕ್ಕೆಂದು ನಿನ್ನನ್ನು ಇಲ್ಲಿಗೆ ಕಳಿಸಿದರೆ ನೀನು ಹೀಗೆ ಮರೆಯಲ್ಲಿ ಕುಳಿತು ಇದೇನು ಮೈಗಳ್ಳತನ ನಡಿಸಿರುವಿ?— ಕೂಡಲೇ ನನ್ನ ಒಳಗಿ ನಿಂದ ಬೆಂಕಿಯಂಥಾದ್ದು ಏನೋ ಒಂದು ಧಾವಿಸಿತು. ಅದರಿಂದ ದೇಹವು ಕಬ್ಬಿಣದಂತೆ ಗಟ್ಟಿಗಟ್ಟಿಯಾಯಿತು! ಆಗ ಹುಲಿಯನ್ನು ಎದುರಿಸಿ ಕೊಂದುಬಿಟ್ಟೆನು' .. .. .. ..

ಜ್ಞಾನತಂತುಗಳೊಳಗೆ ಯಾವುದೋ ಒಂದು ಪ್ರವಾಹವು ಹೊರ ಡುವದದರಿಂದ ದೇಹವು ಕಬ್ಬಿಣದಂತೆ ಗಟ್ಟಿಯಾಗುತ್ತದೆ. ಆಗ ಆ ಲೋಹಕವಚವನ್ನು ಭೇದಿಸಿ ಯಾವ ಭಯವೂ ಒಳಗೆ ಪ್ರವೇ ಶಿಸಲಾರದು. ಮಜ್ಜಾತಂತುಗಳಲ್ಲಿ ಯಾವ ಪರಿವರ್ತನವಾಗುವದ ರಿಂದ ಇಂಥ ಅಸಂಭವವೂ ಕೂಡ ಸಂಭವವಾಗುವದು? ಭೌತಿಕ ಪರೀಕ್ಷೆಗಳಿಂದ ಇದರ ತಥ್ಯಾಂಶವನ್ನು ನಿರ್ಧರಿಸುವುದಕ್ಕೆಂದು

ಇಪ್ಪತ್ತು ವರುಷ ಸತತವಾಗಿ ಇದರ ಅನುಸಂಧಾನದಲ್ಲಿ ತೊಡಗಿ ಕೊಂಡಿದ್ದೆನು. .. .. ..

'(ಮಜ್ಜಾತಂತುಗಳ ಅಣುರಚನೆಯಲ್ಲಿ ಹೆಚ್ಚುಕಡಿಮೆ ಮಾಡಲಿಕ್ಕೆ ಬರುವದೆಂದೂ ಆದರಿಂದ ಈ ಅಸಂಭವವು ಸಂಭವವಾಗುವದೆಂದೂ ನನಗೆ ಕಂಡು ಬಂದಿತು) ಅಣುಸಂಸ್ಥಿತಿಯು ಸಮ್ಮುಖೀನವಾದರೆ ಇಂದ್ರಿಯಗಳಿಗೆ ಅಗ್ರಾಹ್ಯವಾಗಿರುವ ಶಕ್ತಿಯು ಇಂದ್ರಿಯಗ್ರಾಹ್ಯವಾಗುತ್ತದೆ. ವಿಮುಖಸನ್ನಿವೇಶದಿಂದ ಬಾಹ್ಯಿಕ ಭೀಷಣ ಆಘಾತ ಜನಿತ ಉತ್ತೇಜನ ಪ್ರವಾಹವೂ ಕೂಡ ಒಳಗೆ ಹೋಗಿ ಮುಟ್ಟುವದಿಲ್ಲ .. .. ..

'ವಿದ್ಯುತ್ ಪ್ರವಾಹದಿಂದ ಅಣುರಚನೆಯಲ್ಲಿ ಮೇಲ್ಕಾಣಿಸಿದ ಸ್ಥಿತ್ಯಂತರಗಳನ್ನುಂಟುಮಾಡಲಿಕ್ಕೆ ಬರುತ್ತದೆ. ಲಜ್ಜಾವತೀಲತೆಯ ಒಳಮುಚ್ಚುಕ ಅಥವಾ ಮುಟ್ಟಲಮುರಕಿ) ಮೇಲೆ ನಾನೀ ಪ್ರಯೋಗವನ್ನು ಮಾಡಿದೆನು. ಆದರ ಅಣುಸನ್ನಿವೇಶವನ್ನು ಸಮ್ಮುಖೀನಗೊಳಿಸಲು ಹಿಂದೆ ಎಂದೂ ಎಳ್ಳಷ್ಟು ಪರಿಣಾಮ ಕಾಣಿಸಲಾರದ ಸೂಕ್ಷ್ಮ ಆಘಾತಕ್ಕೆ ಅದರ ಎಲೆಗಳೀಗ ಒಳ್ಳೇ ಕಸುವಿನಿಂದ ಚಲಿಸಿದವು. ಆ ಮೇಲೆ ವಿಮುಖೀಕರಣದಿಂದ ಪ್ರಚಂಡ ಆಘಾತಕ್ಕೆ ಸಹ ಅದು ಮಿಸುಕಾಡಲಿಲ್ಲ. ಹೀಗೆಯೇ ಒಂದು ಕಪ್ಪೆಯ ಮೇಲೆಯೂ ಪ್ರಯೋಗ ಮಾಡಿದೆನು. ಅದರ ಅಣುಗಳನ್ನು (ವಿದ್ಯುತೆ ಸಹಾಯದಿಂದ) ಸಮ್ಮುಖೀನಗೊಳಿಸಲು ಹಿಂದೆ ಎಂದೂ ಅವರ ಮೇಲೆ ಪರಿಣಾಮವಾಗದಿದ್ದ ಸಂಗತಿಗಳ ಪರಿಣಾಮವೀಗ ಆಗತೊಡಗಿತು. ಕೊಯ್ದ ಗಾಯದಲ್ಲಿ ಉಪ್ಪು ಸುರುವಿದ ಹಾಗೆ ಅದರ ಮೇಲೆ ಕೆಲವೊಂದು ಪ್ರಯೋಗ ಮಾಡಲು ಅದು ಕೂಡಲೆ ಚಡಪಡಿಸಹತ್ತಿತು. ಆದರೆ ಆಗ ಅದರ ಅಣುಸಂಸ್ಥಿತಿಯನ್ನು ವಿಮುಖಗೊಳಿಸಿದೊಡನೆಯೆ ಅದರ ವೇದನೆಯೆಲ್ಲ ನಿಂತು ಹೋಯಿತು. ಇದೆಲ್ಲ ಆಕಸ್ಮಿಕ ಘಟನೆಯೇನೂ ಅಲ್ಲ; ಪ್ರಾಯೋಗಿಕ ಸತ್ಯವಿದು.

'ಹೊರಗಿನ ಶಕ್ತಿಯಿಂದ ಯಾವದನ್ನು ಮಾಡಲಿಕ್ಕೆ ಬರುವದೋ ಒಳಗಿನ ಶಕ್ತಿಯಿಂದಲೂ ಎಷ್ಟೋ ಪ್ರಸಂಗದಲ್ಲಿ ಅದು ಘಟಿಸುವದು. ಹೊರಗಿನ ಆಘಾತದಿಂದ ಹಸ್ತ ಸ್ನಾಯುಗಳು ಹೇಗೆ ಸಂಕೋಚ ಹೊಂದಬಲ್ಲವೋ ಒಳಗಿನ ಇಚ್ಛೆಯಿಂದಲೂ ಹಾಗಾಗಬಲ್ಲವು. ಇದರ ವಿಪರೀತ ವಿಧಾನದಿಂದ ಅನ್ಯಪರಿಣಾಮವೂ ಹುಟ್ಟಬಲ್ಲದು. ಇದರಿಂದ ಕಂಡುಬರುವದೇನೆಂದರೆ—**ಆಣವಿಕ ಸನ್ನಿವೇಶವನ್ನು ಇಚ್ಛಾ ಶಕ್ತಿಯಿಂದಲೂ ನಿಯಂತ್ರಣಗೊಳಿಸಲಿಕ್ಕಾಗುವದು.** ಆದ್ದರಿಂದ ಒಳಗಿನ ಶಕ್ತಿಯ ಸಹಾಯದಿಂದ ಜ್ಞಾನತಂತುಗಳ ಉತ್ತೇಜನವನ್ನು ಹೆಚ್ಚಿಸಲೂಬಹುದು. ಇಲ್ಲವೆ ತಗ್ಗಿಸಲೂಬಹುದು. ಆದರೆ ಹೀಗೆ ದ್ವಿವಿಧವಾದ ಆಣವಿಕ ಸನ್ನಿವೇಶಗಳನ್ನು ಉಂಟುಮಾಡುವ ಸಾಮರ್ಥ್ಯವು ಬಹುದಿನಗಳ ಅಭ್ಯಾಸ ಹಾಗೂ ಸಾಧನೆಗಳ ಮೇಲೆ ಅವಲಂಬಿಸಿದೆ. ಕೂಸಿಗೆ ಮೊದಮೊದಲಿಗೆ ನಡೆದಾಡಲಿಕ್ಕೆ ಬಾರದು. ಆದರೆ ಬಹಳ ದಿನಗಳ ಪ್ರಯತ್ನದಿಂದಲೂ ಪರಿಪಾಠಿಯಿಂದಲೂ ಅದಕ್ಕೆ ನಡೆದಾಡುವುದು ಸುಲಭವಾಗುವದು.

'ಆದ್ದರಿಂದ ಮಾನವನು ಕೇವಲ ಅದೃಷ್ಟದ ದಾಸನೇನೂ ಅಲ್ಲ. ಆತನೊಳಗೇ ಒಂದು ಶಕ್ತಿಯು ನಿಕ್ಷೇಪಿತವಾಗಿದೆ. ಅದರ ಸಹಾಯದಿಂದ ಆತನು ಬಹಿರ್ಜಗತ್ತಿನ ಅಪೇಕ್ಷೆಯನ್ನೇ ಮಾಡದೆ ಇರಬಲ್ಲನು. ಆತನ ಇಚ್ಛಾನುಸಾರವಾಗಿ ಒಳಹೊರಗಿನ ಪ್ರವೇಶದ್ವಾರಗಳು ಒಮ್ಮೊಮ್ಮೆ ತೆರೆಯಲೂ, ಒಮ್ಮೊಮ್ಮೆ ಮುಚ್ಚಲೂ ಬಲ್ಲವು. ಈ ರೀತಿಯಾಗಿ ದೈಹಿಕ ಹಾಗೂ ಮಾನಸಿಕ ದುರ್ಬಲತೆಗಳ ಮೇಲೆ ಆತನು ಜಯಶಾಲಿಯಾಗಬಲ್ಲನು. ಯಾವ ಸೂಕ್ಷ್ಮ ವಿಷಯಗಳು ಶ್ರುತಿಗೋಚರವಾಗುವದಿಲ್ಲವೋ ಅವು ಶ್ರುತಿಗೋಚರವಾಗುವವು, ದೃಷ್ಟಿಗೋಚರವಾಗದ ವಿಷಯಗಳು ಅವನ ಇದುರಿಗೆ ಜಾಜ್ವಲ್ಯಮಾನವಾಗುವವು. ಬೇರೆ ರೀತಿಯಿಂದ ಆತನು ಬಾಹ್ಯಿಕ ಸಕಲ ಉತ್ಪಾತಗಳನ್ನು ಮೀರಿ ನಿಲ್ಲುವನು. ಸ್ವೇಚ್ಛಾಬಲದಿಂದ ಬಹಿರಂಗದ ಬಿರುಗಾಳಿಯೊಳಗೂ ಆತನು ಅಂತರ ರಾಜ್ಯದಲ್ಲಿ ಅಕ್ಷುಬ್ಧನಾಗಿ ಇರುವನು .. .. ..

**"ಆ ಶಕ್ತಿಯ ಉಚ್ಛ್ವಾಸದಿಂದಲೇ ಜೀವನದ ಪರಿಣತಿ. ಆ ಶಕ್ತಿಯಿಂದಲೇ ಮಾನವನು ದಾಸತ್ವವನ್ನು ಪರಿಹರಿಸಿಕೊಂಡು ದೇವತ್ವಕ್ಕೆ ಮುಟ್ಟುವನು !"**

*    *    *    *

ನೀಟ್ಸನಿಂದ ಮೊದಲುಮಾಡಿ ಜಗದೀಶಚಂದ್ರರ ವರೆಗೆ ಶಕ್ತಿಮಂತ್ರದ ಹಿರಿಕಿರಿಯ ದ್ರಷ್ಟಾರರನ್ನೆಲ್ಲ ನಾವು ಇದೀಗ ಸಂದರ್ಶಿಸಿದೆವು. ಇವರೆಲ್ಲರೂ ಮಾನವದೇಹದೊಳಗಿನ ಒಬ್ಬ ಅಜ್ಞಾತ ಶಕ್ತಿಮಂತ ಪುರುಷನ ಅಸ್ತಿತ್ವವನ್ನು ಎಷ್ಟೇ ಅಲ್ಪ ಪ್ರಮಾಣದಿಂದಲೇ ಆಗಲೊಲ್ಲದೇಕೆ, ಯಾವ ರೀತಿಯಿಂದಲೇ ಆಗಲೊಲ್ಲದೇಕೆ, ಎಷ್ಟೇ ಅಸ್ಪಷ್ಟವಾಗಿಯೇ ಆಗಲೊಲ್ಲದೇಕೆ, ಎಷ್ಟೇ ನ್ಯೂನತಾಯುಕ್ತವಾಗಿಯೆ ಆಗಲೊಲ್ಲದೇಕೆ, ಏನೇ ಆಗಲಿ ಕಂಡುಹಿಡಿದಿದ್ದಾರೆ. ಅಂತಲೇ ಇವರು ದ್ರಷ್ಟಾರರು.

ನೀಟ್ಸನ ಭಾವನಾದೃಷ್ಟಿ, ಟ್ರಾಯಿನನ ಅಂತರ್ದೃಷ್ಟಿ, ಪ. ಈ. ಅವರ ಧ್ಯಾನ ದೃಷ್ಟಿ, ಬೋಸರ ಪರೀಕ್ಷಾದೃಷ್ಟಿ ಇವೆಲ್ಲವುಗಳಿಗಿಂತ ಮೇಲೆ ರಾಮತೀರ್ಥರ ಆತ್ಮದೃಷ್ಟಿ, ವಿವೇಕಾನಂದರ ಸತ್ಯದೃಷ್ಟಿ– ಈ ಸಕಲ ಸಬಲ ದೃಷ್ಟಿಗಳೆಲ್ಲ ಕೂಡಿ ನಿರ್ಮಿಸಿದ ಶಕ್ತಿಮಂದಿರಕ್ಕೆ ಅರವಿಂದ ಯೋಗಿಗಳ ದಿವ್ಯದೃಷ್ಟಿಯು ಭವ್ಯ ಕಳಸವನ್ನಿಟ್ಟಿದೆ. ಇಂದಿನ ಶಕ್ತಿಭಕ್ತರು ಈ ದಿವ್ಯ ದೇವಾಲಯದ ಗರ್ಭಗುಡಿಯಲ್ಲಿ ಸಹಸ್ರದಳ ಪದ್ಮಪೀಠದ ಮೇಲೆ ಮಂಡಿಸಿದ ಮಹಾಶಕ್ತಿ ಮಾತೆಯ ಚರಣಾರವಿಂದಗಳನ್ನು ಶಿರಃಕಮಲದ ಮೇಲಿರಿಸಿಕೊಂಡು ಪಿಂಡಾಂಡದೊಳಗಿನ ಪ್ರಚಂಡ ದೈತ್ಯರ ರುಂಡಗಳನ್ನಾಡುವುದಕ್ಕೆ ಆ ರಣಚಂಡಿಯನ್ನು ಆಹ್ವಾನಿಸಬೇಕು ! ಗುರು ಅರವಿಂದರ ಯೋಗನೆಂಬುದು ಇದೇ.

"ಯಾ ದೇವಿ ಸರ್ವಭೂತೇಷು । ಶಕ್ತಿ ರೂಪೇಣ ಸಂಸ್ಥಿತಾ ॥
ನಮಸ್ತಸ್ಯೈ ನಮಸ್ತಸ್ಯೈ । ನಮಸ್ತಸ್ಯೈ ನಮೋನಮಃ ॥"

— ಸಪ್ತಶತಿ

**"ಪೌರುಷಂ ನೃಷು"**

— ಗೀತೆ

**ಓಂ ಶ್ರೀ ಓಂ**

# ೨ ಜ್ಞಾನದ ಉನ್ಮೇಷ

"ನನಗೆ ತಿಳಿಯಲಾರದೆ ನಾನು ಯಾವುದನ್ನೂ ನಂಬಲಾರೆನು. ಬಹು ಜನರು ನಂಬುತ್ತಾರೆಂದು ನಾನು ನಂಬಲಾರೆನು. ಹಿಂದಿನವರು ಹೇಳಿದ್ದಾರೆಂದು ನಾನು ನಂಬಲಾರೆನು. ನಂಬುವದರಿಂದ ಹಿತ ವುಂಟೆಂದು ನಾನು ನಂಬಲಾರೆನು. ನಂಬದಿದ್ದರೆ ಅಹಿತವಾಗುವದೆಂದು ನಾನು ನಂಬಲಾರೆನು. ನನಗೆ ಸತ್ಯವೆಂದೆನಿಸಿದರೆ ಮಾತ್ರ ನಂಬುವೆನು. .. .. ..

"ಬಹು ಜನರು ನಂಬಿದ್ದು ನಿಜವಿರಲೇಬೇಕೆಂದು ಹೇಳುವುದ ರಲ್ಲಿ ಅರ್ಥವಿಲ್ಲ. ಯಾಕೆಂದರೆ ಭೂಮಿ ತಿರುಗುತ್ತಿದ್ದರೂ ಅವರು ಸೂರ್ಯನೇ ತಿರುಗುತ್ತಾನೆಂದು ನಂಬಿದ್ದಾರೆ. ಹಿಂದಿನವರು ಹೇಳಿ ದ್ದಾರೆಂಬ ಮಾತಿನಲ್ಲಿ ಹುರುಳಿಲ್ಲ. ಯಾಕೆಂದರೆ ಅವರೂ ತಮಗಿಂತ ಹಿಂದಿನವರು ಹೇಳಿದ್ದಾರೆಂಬ ಕಾರಣದಿಂದ ಸ್ವಂತ ವಿಚಾರಿಸದೆ ನಂಬಿರ ಲಿಕ್ಕೆ ಶಕ್ಯವಿದೆ. ನಂಬುವದರಿಂದಲೇ ಹಿತವಾಗುವದೆಂದು ಹೇಳು ವುದು ಸರಿಯಲ್ಲ. ಸಿಕ್ಕಸಿಕ್ಕ ಮಾತುಗಳನ್ನೆಲ್ಲ ನಂಬಿದ್ದರಿಂದಲೇ ಜನಾಂಗವು ಮೂಢತನಕ್ಕೆ ಇಳಿದಿದೆ. ನಂಬದಿದ್ದರೆ ಅಹಿತವಾಗುವ ದೆಂದು ನಂಬುವವರಿಗಿಂತ ಹೆಚ್ಚಿನ ಹುಚ್ಚರೇ ಇರಲಾರರು. ಜನರ ಮೂಢಶ್ರದ್ಧೆಯ ಮೇಲೆ ಹೊಟ್ಟೆ ಹೊರೆಕೊಳ್ಳುವವರು ಮಾಡಿದ ಚಾತುರ್ಯವಿದು. .. .. .. ..

"ಹಿಂದಿನವರಿಗೆ ಸತ್ಯವು ತಿಳಿಯಲಿಕ್ಕೆ ಶಕ್ಯವಾಗಿದ್ದರೆ ಇಂದಿ ನವರಿಗೇಕೆ ಶಕ್ಯವಾಗಬಾರದು? ಒಬ್ಬರಿಗೆ ತಿಳಿದಿದ್ದರೆ ಇನ್ನೊಬ್ಬರಿಗೇಕೆ ತಿಳಿಯಬಾರದು? ಅನ್ಯರಿಗೆ ತಿಳಿದರೆ ನಮಗೇಕೆ ತಿಳಿಯಲಾರದು? . . . .

"ನಮಗೆ ತಿಳಿದರೆ ಮಾತ್ರ ನಾವು ನಂಬತಕ್ಕವರು; ಇಲ್ಲದಿದ್ದರೆ ಇಲ್ಲ."

ಇಂದಿನ ಜಗದ ಕೂಗು ಇದು.

ಇದು ಒಬ್ಬರ ಕೂಗಲ್ಲ, ಇಬ್ಬರ ಕೂಗಲ್ಲ; ಸಾವಿರ ಜನರ ಕೂಗು, ಲಕ್ಷ ಜನರ ಕೂಗು, ಕೋಟಿಕೋಟಿ ಜನರ ಅಂತರಂಗದ ಕೂಗು.

"ಬೇಕು—ತಿಳಿಯಬೇಕು. ಸ್ವಂತ ಸಮ್ಮಂದ ನಮಗೇ ತಿಳಿಯಲಿಕ್ಕೆ ಬೇಕು."

ಹೊಸಕಾಲದ ಯುಗಮಂತ್ರವಿದು.

'ಬೇಕು—ಬೇಕು' ಎಂಬ ಅಂತರಂಗವು ಕೂಗತೊಡಗಿತೋ, ತಗೋ—ಹುಡುಕಾಡಲಿಕ್ಕೆ ಆರಂಭ.

ನವ ಮಾನವನು—ಒಂದನ್ನು ಮುಟ್ಟಿ ನೋಡಿದನು, ಒಂದನ್ನು ತಟ್ಟಿ ನೋಡಿದನು, ಒಂದನ್ನು ಮುರಿದು ನೋಡಿದನು, ಒಂದನ್ನು ಹರಿದು ನೋಡಿದನು, ಒಂದನ್ನು ಕಿತ್ತಿ ನೋಡಿದನು, ಒಂದನ್ನು ಕುಟ್ಟಿ ನೋಡಿದನು. ಹೇಗೆ ನೋಡಿದರೂ ಮುಂಚೆ ಕಂಡದ್ದಕ್ಕಿಂತ ಹೆಚ್ಚಿಗೇನೂ ಕಾಣಲಿಲ್ಲ. ಸುತ್ತಿಸುತ್ತಿ ಹೊರಟ ಸ್ಥಳಕ್ಕೇ ತಿರು ತಿರುಗಿ ಬಂದನು.

ಆದರಿಂದ ಒಮ್ಮೆ ಹುಚ್ಚು ಹಿಡಿದವನಂತಾದನು, ಒಮ್ಮೆ ಪಿತ್ತ ತಲೆಗೇರಿದವನಂತೆ ಮಾಡಿದನು, ಒಮ್ಮೆ ಕೊಂದುಕೊಳ್ಳುವುದಕ್ಕೆ ಓಡಿ ದನು, ಒಮ್ಮೆ ಕೊಲ್ಲುವುದಕ್ಕೆ ಹಾರಿದನು.

"ಅದೂ ಸುಳ್ಳು, ಇದೂ ಸುಳ್ಳು, ಅವರದೂ ಭ್ರಮೆ, ನನ್ನದೂ ಭ್ರಮೆ. ಅವರೂ ವ್ಯರ್ಥ, ನಾನೂ ವ್ಯರ್ಥ. ಎಲ್ಲಾ ಸ್ಮಶಾನವೇ ಸ್ಮಶಾನ!"

ಎಂದು ಕಂಗೆಟ್ಟು ಕೈಸಾಗದೆ ನಿಂತನು.

ನಿಲ್ಲಲಿಕ್ಕೆ ಅವಕಾಶವೆಲ್ಲಿ? ಒಳಗಿನ ಕೂಗು ಕೂಗಿಯೇ ಕೂಗು ತ್ತಿತ್ತು—'ತಿಳಿಯಲಿಕ್ಕೇ ಬೇಕು, ತಿಳಿಯದೆ ಗತ್ಯಂತರವಿಲ್ಲ.'

ಪುನಃ ಓಟಕ್ಕೆ ಆರಂಭ.

ಸಿಕ್ಕಿತೆಂದು ಹಿಡಿಯಹೋದರೆ ಹಾರಿಹೋಗುವದು. ಹಾರಿತೆಂದು ಆಶೆ ಬಿಟ್ಟರೆ ಬಳಿಯಲ್ಲಿ ಸುಳಿಯುವದು. ಹೌದೆಂದರೆ ಅಲ್ಲದಂತಾಗುವದು, ಅಲ್ಲವೆಂದರೆ ಹೌದೆನಿಸುವದು. ಹೌದು–ಅಲ್ಲ ಎಂಬುದರ ಇಂದ್ರಜಾಲದಲ್ಲಿ ದಾರಿಯೆ ಸಿಗಲೊಲ್ಲದು.

"ಹೌದೆನ್ನಲಿಕ್ಕೂ ಬರುವಂತಿಲ್ಲ, ಅಲ್ಲವೆನ್ನಲಿಕ್ಕೂ ಬರುವದಿಲ್ಲ. ಅಲ್ಲವೆಂದರೆ, ಅಲ್ಲದ್ದು ಬಂತೆಲ್ಲಿಂದ? ಹೌದೆಂದರೆ ಪ್ರತ್ಯಕ್ಷ ಪ್ರಮಾಣವೇನು?"

ಕುಳಿತನು, ಕಣ್ಣುಮುಚ್ಚಿದನು, ಸುಖವೆನಿಸಿತು. ಮುಂಚೆ ನಡೆಯುತ್ತಿದ್ದನು, ಕಣ್ತೆರೆದಿದ್ದನು, ಅಸುಖವೆನಿಸುತ್ತಿತ್ತು. ಈಗ ಸುಖವೆನಿಸಹತ್ತಿತು. ಮೊದಲಿನ ಅಸುಖವೆಲ್ಲಿ ಹೋಯಿತು? ಬೇಕಾದದ್ದು ಸುಖ, ತಿಳುವಳಿಕೆಯಲ್ಲ. ಮೊದಲಿಗೆ ತಿಳುವಳಿಕೆ ಬೇಕಾಗಿತ್ತು. ಯಾಕೆಂದರೆ ಅದಿಲ್ಲದ್ದರಿಂದ ಅಸುಖವೆನಿಸುತ್ತಿತ್ತು. ಈಗ ತಿಳುವಳಿಕೆ ಸಾಕು, ಯಾಕೆಂದರೆ ಅದಿಲ್ಲದೆಯೂ ಈಗ ಸುಖವೆನಿಸುತ್ತಿದೆ. ಜಗತ್ತಿಗೆ ಸುಖ ಬೇಕೇ ಹೊರತು ತಿಳುವಳಿಕೆಯಲ್ಲ. ತಿಳಿಯದಿದ್ದದ್ದರಿಂದಲೇ ಯಾವಾಗ ಸುಖಕ್ಕೆ ಬಾಧೆ ಬರುವದೋ ಆವಾಗ ತಿಳುವಳಿಕೆ ಮುಖ್ಯ; ಆದರೆ ಉಳಿದೆಲ್ಲ ಕಾಲದಲ್ಲಿ ಸುಖವೇ ಮುಖ್ಯ. ಸುಖಕ್ಕಾಗಿ ದುಃಖದ ಸಹನ. ದುಃಖಕ್ಕಾಗಿ ದುಃಖ ಯಾರಿಗೆ ಬೇಕಾದೀತು? ಸುಖಕ್ಕಾಗಿ ಲೋಕ ನಂಬುಗೆ ಹಿಡಿದಿದೆ. ನಂಬುಗೆಗಾಗಿ ಒಮ್ಮೊಮ್ಮೆ ಅದು ಸುಖವನ್ನು ಆಹುತಿ ಕೊಡುವದುಂಟು. ಇಲ್ಲದಿದ್ದರೆ ಸುಖವನ್ನು ಕೊಡುವ ನಂಬುಗೆಯೇ ಸತ್ತುಹೋಗಿ ಜೀವನವು ನರಕವಾಗುತ್ತಿತ್ತು. ಅಂತೂ ಮುಖ್ಯವಾಗಿ ಬೇಕಾದದ್ದು ಸುಖ!!!

ತಿಳಕೊಳ್ಳಬೇಕಾಗಿರುವ ವಸ್ತು ತಿಳಕೊಳ್ಳಲಿಕ್ಕೆ ಬರುವಂಥಾದ್ದಲ್ಲವೆಂದು ತಿಳಿದರೆ ಅದೇನು ಸಣ್ಣಮಾತಲ್ಲ. ತಿಳಕೊಳ್ಳಬೇಕಾದದ್ದನ್ನು ಅರ್ಥ ತಿಳಿದುಕೊಂಡಂತೆಯೆ ಸರಿ. ಮುಗಿಲಿನ ಅಂಚನ್ನು ಮುಟ್ಟುವೆನೆಂದು ಒಬ್ಬನು ರೆಕ್ಕೆ ಕಟ್ಟಿಕೊಂಡು ಮೇಲಕ್ಕೆ ಹಾರಿದನು. ಹಾರಿ

ಹಾರಿ, ಕೊನೆಗೆ 'ಇದಕ್ಕೆ ಅಂಜೇ ಇಲ್ಲ' ಎಂದು ಹೊರಳಿದನು. ಹಾಗೆ ಹೊರಳಿದ್ದರಿಂದ ಅವನಿಗೂ ಸುಖವಾಯಿತು, ಅನ್ಯರಿಗೂ ಗೊತ್ತಾಯಿತು. ಇಷ್ಟು ತಿಳಿದ ಮೇಲೆಯೂ ಆತನು ಹಾಗೇ ಮೇಲಕ್ಕೆ ಹಾರಿದ್ದರೆ ಅವನೊಬ್ಬ ಹುಚ್ಚ. ಯಾಕೆಂದರೆ ಕೊನೆಗೆ ಪ್ರಾಣಾಂತಿಕ ಸಮಯದಲ್ಲಾದರೂ ಆತನು— 'ಇದಕ್ಕೆ ಅಂತವಿಲ್ಲ' ಎಂಬ ವಾಕ್ಯ ವನ್ನೇ ಉಚ್ಚರಿಸಬೇಕಾಗುತ್ತಿತ್ತು. ಆದರೆ ಆಗ ಅಂದು ಫಲವೇನು? ಸ್ವಂತಕ್ಕೆ ಉಪಯೋಗವಾಗಲಿಲ್ಲ; ಅನ್ಯರಿಗೆ ನೆಲೆಹತ್ತಲಿಲ್ಲ!!! ಸಮಯ ವಿರುವಾಗಲೇ ಕೈ ಸಾಧಿಸಿಕೊಂಡವನು ಜಾಣನು.

"ನಾನು ತೀರ ಸಯುಕ್ತಿಕವೆಂದು ತಿಳಿದುಕೊಂಡಿದ್ದ ಸಂಗತಿಯು ನಾನು ತಿಳಿದುಕೊಂಡಷ್ಟು ಸಯುಕ್ತಿಕವಾಗಿರಲಿಲ್ಲ. ಅದರಂತೆ ನಾನು ತೀರ ಅಯುಕ್ತಿಕವೆಂದು ತಿಳಕೊಂಡುಬಿಟ್ಟಿದ್ದ ಸಂಗತಿಯು ನಾನು ಕಲ್ಪಿಸಿರುವಷ್ಟು ಅಯುಕ್ತಿಕವಾಗಿರಲಿಲ್ಲ.........

"ಹೀಗೆ ನಾನು ಮಾನವಜೀವನದಲ್ಲಿ ವಿಚಾರದ ಪೂರತು ಶ್ರದ್ಧೆಗೂ ಸ್ಥಳವಿದೆಯೆಂದು, ಹಾಗೂ ಈ ಶ್ರದ್ಧೆಯೇ ಜೀವನವನ್ನು ಬದುಕಿಸಿದೆಯೆಂದೂ ಒಪ್ಪಿಕೊಂಡೆನು.........

'ವಿಚಾರವಾದದ ಮೇಲೆ ನಿಂತ ಜ್ಞಾನದಿಂದ ಜೀವನವು ನಿರರ್ಥಕ ವೆಂದು ತೋರಿತು. ಅದರಿಂದ ಆತ್ಮಹತ್ಯಕ್ಕೆ ನನ್ನ ಮನವೊಲಿಯಿತು; ಜೀವನವು ಸ್ತಂಭಿತವಾಯಿತು. ಹೀಗೆ ತರ್ಕಗಳಿಂದ ನಾನು ನಿಶ್ಚಯಕ್ಕೆ ಬಂದರೂ ಆಗಲೂ ನನ್ನ ಜೀವನವು ಸಾಗಿಯೇ ಇತ್ತು. ನನ್ನ ಸುತ್ತು ಮುತ್ತಲಿನ ಜನರೆಲ್ಲಾ ಬದುಕಿರುವುದನ್ನು ಕಂಡ ಮೇಲೆ, ಜೀವನದ ಸಮಸ್ಯೆ ಅವರಿಗೆಲ್ಲಾ ತಿಳಿದಿದೆಯೆಂದೇ ನಿರ್ಧರಿಸಿದೆನು. ಮತ್ತು ಶ್ರದ್ಧೆ ಯಿಂದಲೇ ಜೀವನವು ಶಕ್ಯವೆಂದು ಕಂಡುಕೊಂಡೆನು. ದೇಶದೇಶಾಂತ ರದ ಆದಿಬುನಾದಿಯ ಜನರನ್ನೂ ಆಧುನಿಕರನ್ನೂ ಕುರಿತು ಆಲೋಚಿ ಸಲು ನನಗೆ ಇದೇ ಕಂಡು ಬಂದಿತು. ಜಗತ್ತಿನಲ್ಲಿ ಮಾನವಜೀವನದ ಆರಂಭದಿಂದಲೂ ಶ್ರದ್ಧೆಯೇ ಜೀವನವನ್ನು ಶಕ್ಯಗೊಳಿಸಿದೆ. ಶ್ರದ್ಧೆಯು

ಸಾಪೂಸ್ವರೂಪರೇಖೆಯೂ ಎಲ್ಲೆಲ್ಲಿಯೂ ಎಂದೆಂದೂ ಹೆಚ್ಚುಕಡಿಮೆ ಒಂದೇ ವಿಧವಾಗಿರುತ್ತದೆ .. .. ..

'ಶ್ರದ್ಧೆಯೇ ಜೀವನದ ಬಲವು. ಯಾವನೊಬ್ಬನು ಬದುಕಿದ್ದಾನೆಂದರೆ ಅವನು ಏನಾದರೊಂದರಲ್ಲಿ ಶ್ರದ್ಧೆಯನ್ನು ಇಟ್ಟೇ ಇರುತ್ತಾನೆ. ಏತರಲ್ಲಿಯೂ ಶ್ರದ್ಧೆಯನ್ನಿಟ್ಟಿರದಿದ್ದರೆ ಆತನು ಬದುಕಿಯೇ ಇರುತ್ತಿದ್ದಿಲ್ಲ. ಆತನಿಗೆ ಸಾಂತದಲ್ಲಿ ಕೊರತೆಯಿಲ್ಲವೆಂದು ಕಂಡು ಬಂದರೆ ಆತನು ಸಾಂತದಲ್ಲಿಯೇ ಶ್ರದ್ಧೆಯನ್ನಿಟ್ಟಿರುತ್ತಾನೆ. ಅದರಲ್ಲಿ ಕೊರತೆ ಕಂಡರೆ ಅನಂತದ ಮೇಲೆ ಶ್ರದ್ಧೆಯನ್ನಿಡುತ್ತಾನೆ. ಶ್ರದ್ಧಾರಹಿತನಾಗಿ ಆತನಿಗೆ ಬಾಳಲಿಕ್ಕೇ ಆಗದು .. .. ..

'ನನಗೆ ಈಗ ನಿಚ್ಚಳವಾಗಿ ಅನಿಸಿಬಿಟ್ಟಿದ್ದೇನೆಂದರೆ—ಬಾಳಿ ಬದುಕಬೇಕೆನ್ನುವವನು ಅನಂತದ ಕಡೆಗೆ ಲಕ್ಷ್ಯವನ್ನಾದರೂ ಕೊಟ್ಟಿರಬಾರದು; ಅಥವಾ ಸಾಂತ-ಅನಂತಗಳ ಪರಸ್ಪರ ಸಂಬಧವನ್ನು ಜೋಡಿಸಲಿಕ್ಕೆ ಬರುವಂತೆ ಜೀವನದ ಅರ್ಥವನ್ನಾದರೂ ತಿಳಿದುಕೊಂಡಿರಬೇಕು.' *

ಶ್ರದ್ಧೆಯ ಮಹಿಮೆ ಇಷ್ಟೊಂದು ಇದೆಯಾದರೂ ಅದೇ ಏನೂ ಜ್ಞಾನವಲ್ಲ. ಶ್ರದ್ಧೆಯ ಅರ್ಥವು ಇಷ್ಟೇ. ಅದೇನೆಂದರೆ–ಜೀವದ ಆಳದಲ್ಲಿ ಎಲ್ಲಿಯೋ ನಿಸ್ಸಂದಿಗ್ಧತೆಯುಂಟಾಗಿದೆ. ಹೊರಮಗ್ಗಲಲ್ಲಿ ಅದರ ಕಾರಣವು ಪ್ರಕಟವಿಲ್ಲ. ಆದರೂ ಬುದ್ಧಿಯು ಮೊದಲಿನಂತೆ ಹಾರಾಡುವದಿಲ್ಲ. ಇದಕ್ಕಿಂತ ಹೆಚ್ಚಿಗೇನಾದರೂ ತಿಳಿದರೆ ಬುದ್ಧಿಗೆ ಅದು ಬೇಕಾಗಿಲ್ಲವೆಂತಲ್ಲ. ಆದರೆ ಈಗ ಅದು ತಾಳ್ಮೆಯನ್ನು ಕಲಿತಿದೆ.

ಶ್ರದ್ಧೆ ಹುಟ್ಟುವದಕ್ಕಿಂತ ಮುಂಚಿನ ಓಟದಿಂದ ಜೀವಕ್ಕೆ ಸಂಕಟ ಹೆಚ್ಚು. ಆಗ ಚಿತ್ತದ ಅಸ್ಥಿರತೆಯೇ ಜೀವಕ್ಕೆ ತಲೆ ಬೇಸರಾಗುತ್ತದೆ. ಶ್ರದ್ಧೆ ಹುಟ್ಟಿದ ಮೇಲೆ ಅಸ್ಥಿರತೆ ತಪ್ಪುತ್ತದೆ. ಇದಕ್ಕೇ ನಿಶ್ಚಯ ಸ್ಥಿತಿಯೆಂದೆನ್ನುವರು. ನಿಜವಾಗಿ ಈ ಅವಸ್ಥೆ ಬಂದ ಮೇಲೆಯೇ ಮನುಷ್ಯನು ಜ್ಞಾನಕ್ಕೆ ಅರ್ಹನಾಗುತ್ತಾನೆ.

---

* ಮಹರ್ಷಿ ಟಾಲ್‌ಸ್ಟಾಯ್ ಅವರ ಆತ್ಮಚರಿತ್ರೆ '**ಬಾಳಿನಲ್ಲಿ ಬೆಳಕು**' ('ಮಾಯ್ ಕನ್‌ಫೆಶನ್') ಎಂಬ ಗ್ರಂಥದಿಂದ.

ಮೊದಲಿನ ಅಸ್ಥಿರತೆಯು ಕೋಲಾಹಲದಲ್ಲಿಯೂ ಕೂಡ ಒಳಗೊಳಗೆ ಗುಪ್ತ ಶ್ರದ್ಧೆಯೇ ಮಾರ್ಗದರ್ಶಕವಾಗಿರುತ್ತದೆ. ನಿಜಾಂಶವು ತನಗೆ ಲಭ್ಯವಾಗಬಲ್ಲದೆಂಬ ಶ್ರದ್ಧೆಯಿಲ್ಲದಿದ್ದರೆ ಆತನು ಅಷ್ಟೊಂದು ಕೋಲಾಹಲವನ್ನು ಹೇಗೆ ಎಬ್ಬಿಸುತ್ತಿದ್ದನು ? ಶ್ರದ್ಧೆಯು ದಿಗ್ದರ್ಶಕವಾದ ಉತ್ತರಮುಖೀ ಯಂತ್ರವಿದ್ದಂತೆ.

ಪ್ರಖರ ಸಂದೇಹವು ಸತ್ಯದ ವಿಷಯದಲ್ಲಿ ನಮಗಿರುವ ಗಾಢಾನುರಾಗವನ್ನೇ ಸೂಚಿಸುತ್ತದೆ. ನಮಗೆ ಶುದ್ಧ ಸತ್ಯದ ಅಗತ್ಯವೇ ಇದ್ದಿರದ್ದರೆ ಸಿಕ್ಕ ಸಿಕ್ಕ ಮಾತುಗಳಿಗೆಲ್ಲ ಬೇಕಾದಂತೆ ಒಪ್ಪಿಕೊಳ್ಳುತ್ತಿದ್ದೆವು. ಯಾಕೆಂದರೆ ಬೇಕಾಗಲಾರದ್ದು ಎಂಥದಿದ್ದರೇನು ?

ಒಳಗೆ ಶ್ರದ್ಧೆಯು ಜಾಗೃತವಾಗಿ ಇರಬೇಕು; ಹೊರಗೆ ಬುದ್ಧಿಯು ತಾಳ್ಮೆಯಿಂದ ಆಲೋಚನೆ ಮಾಡುತ್ತಿರಬೇಕು. ಇತಿಹಾಸ ಸಂಶೋಧಕರಲ್ಲಿಯೂ ಭೌತಿಕ ಶಾಸ್ತ್ರಜ್ಞರಲ್ಲಿಯೂ ಈ ಮಾತಿನ ನಿದರ್ಶನವನ್ನು ಕಾಣಬಹುದು. ಐನ್‌ಸ್ಟೀನರೂ, ಜಗದೀಶಚಂದ್ರರೂ ಸ್ವಮುಖದಿಂದ ಈ ಮಾತನ್ನು ಒಪ್ಪಿಕೊಂಡಿದ್ದಾರೆ. ಅವರಿಗೆ ಅವಿದಿತ ವಿಷಯಗಳ ಆಭಾಸವು ಪ್ರಾಣದಲ್ಲಿ ಮೊದಲು ಹೇಗೋ ಉಂಟಾಗುತ್ತದೆ. ಬಳಿಕ ಆ ಶ್ರದ್ಧೆಯಿಂದ ವಿವಿಧ ಪ್ರಯೋಗಗಳನ್ನು ಮಾಡಿ ಅಸ್ಪಷ್ಟವಾಗಿದ್ದುದನ್ನು ಸ್ಪಷ್ಟಗೊಳಿಸಿಕೊಳ್ಳುತ್ತಾರೆ; ಅಪೂರ್ಣವಾಗಿದ್ದುದನ್ನು ಪೂರ್ಣಗೊಳಿಸುತ್ತಾರೆ; ಆಭಾಸವಾಗಿ ಇದ್ದುದನ್ನು ನೈಜಕ್ಕೆ ಇಳಿಸುತ್ತಾರೆ.

ಇಜಿಪ್ತ, ಬಾಬಿಲೋನಗಳ ಅತಿಪುರಾತನ ಲಿಪಿಗಳನ್ನೋದುವ ಪದ್ಧತಿಯನ್ನು ಇತಿಹಾಸ ಸಂಶೋಧಕರು ಇದೇ ಮೇರೆಗೆ ಹುಡುಕಿ ತೆಗೆದರು. ಹತ್ತಿಪ್ಪತ್ತು ವರಷುಗಳ ಕಾಲ ಒಂದೇ ಸವನೆ ಯಾವದೋ ಅವಿದಿತ ಶ್ರದ್ಧೆಯಿಂದ ಹಾಳು ದೇಗುಲಗಳಲ್ಲಿ ಲಿಪಿಗಳ ಮುಂದೆ ಎಂಟಿ ಎಂಟಿ ಸ್ವರ್ಗವನ್ನು ನೋಡುತ್ತ ಕುಳಿತುಕೊಂಡರು. ಆರಾರಿಗೂ ಗೊತ್ತಿಲ್ಲದ ಲಿಪಿಗಳ ಜ್ಞಾನವು ತಮಗೆ ಆದೀತೆಂಬ ಭರವಸವು ಅವರೊಳಗೆ ಎಲ್ಲಿಂದ ಬಂತೆಂಬುದನ್ನು ಯಾರು ಹೇಳಬೇಕು ? ಏನೂ ಗೊತ್ತಿಲ್ಲದ್ದು

ಮುಂದೆ ಸಂಪೂರ್ಣವಾಗಿ ಅವರಿಗೆ ಹೊಳೆಯುವುದಕ್ಕೆ ಬಾಹ್ಯಕ ಕಾರಣ ಗಳನ್ನಾದರೂ ಏನು ತೋರಿಸಲಿಕ್ಕೆ ಶಕ್ಯವಿದೆ ?

ಬಾಬಿಲೋನದ ಲಿಪಿವಾಚನ ಪದ್ಧತಿಯನ್ನು ಹುಡುಕಿ ತೆಗೆದವನ ಕಥೆಯನ್ನು ಕೇಳಿದರೆ ಆಶ್ಚರ್ಯವಾಗುತ್ತದೆ. ಅದು ಹೇಗೆಂದರೆ—

ಜಾರ್ಜ್ ಸ್ಮಿಥ್ ಎಂಬವನು ಕಂಬಾರ ಜಾತಿಯ ಬಡ ಹುಡುಗನು. ೧೪ ವರ್ಷ ವಯಸ್ಸಿನಲ್ಲಿ ಇವನ ತಂದೆಯು ಇವನನ್ನು ಒಬ್ಬ ಕೆತ್ತಿಗೆಯ ಕೆಲಸದವನ ಕೈಕೆಳಗೆ ಕೆಲಸವನ್ನು ಕಲಿಯಲಿಕ್ಕೆ ಇಟ್ಟಿದ್ದನು. ಮೊದಲಿನಿಂದಲೇ ಹುಡುಗನು ಬಹು ಬುದ್ಧಿವಂತನೂ ಆಲೋಚನಾಪಟುವೂ ಆಗಿದ್ದನು. ಅದೇ ಹೊತ್ತಿಗೆ 'ಮೇಸೋಪೊಟೇಮಿಯಾ'ದಲ್ಲಿ ಭೂಸಂಶೋಧನವು ನಡೆದಿದ್ದು ಅದರ! ಕುತೂಹಲ ಜನಕ ಸಮಾಚಾರಗಳು ವೃತ್ತಪತ್ರಗಳಲ್ಲಿ ಆಗಾಗ ಪ್ರಕಟವಾಗುತ್ತಿದ್ದವು. ಮತ್ತು ಅಲ್ಲಿ ಹೊರಟ ಸಾಮಾನುಗಳು ಲಂಡನ್ನಿನ ಬ್ರಿಟಿಷ್ ಮ್ಯೂಜಿಯಮ್ಮಿಗೆ ಬರುತ್ತಿದ್ದವು. ಈ ಹುಡುಗನು ದಿನಾಲು ಅವುಗಳನ್ನು ನೋಡುವುದಕ್ಕೆಂದು ಅಲ್ಲಿಗೆ ಹೋಗಿ ಎಷ್ಟೋ ಹೊತ್ತು ಅವುಗಳನ್ನೇ ನೋಡುತ್ತಿದ್ದನು. ಈತನ ಈ ಕ್ರಮವು ಒಮ್ಮೆ ಆ ಭೂಸಂಶೋಧನ ಖಾತೆಯ ಸುಪರಿಂಟೆಂಡೆಂಟನ ಕಣ್ಣಿಗೆ ಬೀಳಲು ಅವನು ತನ್ನ ಸ್ವಂತದ ಅಭ್ಯಾಸದ ಕೋಣೆಯಲ್ಲಿಯೇ ಕುಳಿತುಕೊಂಡು ಆ ಲೇಖಗಳ ಅಭ್ಯಾಸ ಮಾಡಲಿಕ್ಕೆ ಈತನಿಗೆ ಒಪ್ಪಿಗೆಯನ್ನಿತ್ತನು. ಒಡನೆಯೇ ಸ್ಮಿಥ್ನನ ಅಭ್ಯಾಸಕ್ಕೆ ಭರವೇರಿತು. ಮತ್ತು ಆತನು ತನ್ನ ಸ್ವಂತದ ಬುದ್ಧಿ ಸಾಮರ್ಥ್ಯದಿಂದಲೇ ಆ ಲಿಪಿಗಳನ್ನೋದುವ ಗುರು ಕೀಲಿಯನ್ನು ಹುಡುಕಿ ತೆಗೆದನು. ಅದರ ಮೂಲಕವೆ ೧೮೬೭ರಲ್ಲಿ ಆತನನ್ನು ಬ್ರಿಟಿಷ್ ಮ್ಯೂಜಿಯಮ್ಮಿನ ಆ ವಿಭಾಗದ ಮೇಲೆ ಸುಪರಿಂಟೆಂಡೆಂಟನನ್ನಾಗಿ ನಿಯಮಿಸಲಾಯಿತು.

ಇದಕ್ಕಿಂತ ಆಶ್ಚರ್ಯಕರವಾದ ಇನ್ನೊಂದು ಘಟನೆಯುಂಟು. ಜಗದೀಶಚಂದ್ರ ಬೋಸರು ತಮ್ಮ ಜೀವನದಲ್ಲಿ ನಡೆದ ಆ ಸಮಾಚಾರವನ್ನು ತಾವೇ ಹೀಗೆ ಹೇಳಿರುವರು—

'ಒಮ್ಮೊಮ್ಮೆಯೊಮ್ಮೆ ಯಾರೋ ದೊಡ್ಡ ದನಿಯಿಂದ–' **ಹಜೂರ್!'** ಎಂದು ಅಂದರು. ಆದರೆ ಯಾರೂ ಕರೆದದ್ದು ಕೇಳಿಸಲಿಲ್ಲ. ಆದರೂ ಭಕ್ತಿಕರುಣೆಗಳಿಂದ ಕೂಡಿದ ಉಚ್ಛ್ವಸಿತ ಸ್ವರದಿಂದ–' ಏನಾಜ್ಞೆ ಪ್ರಭೋ!' ಎಂದು ಅಂದದ್ದು ಕೇಳಿಸಿತು. ಯಾರು ನಿನ್ನ ಪ್ರಭುವು? ಯಾರ ಅಪ್ಪಣೆಯಿಂದ ನೀನು ಹೀಗೆ ಉದ್ವಿಷ್ಟನಾಗಿರುವಿ?......ಏನು ಆಶ್ಚರ್ಯವಿದು!!! ಒಂದು ಮಾತಿನಿಂದಲೇ ಜೀವನದ ಸ್ವರಗಳೆಲ್ಲ ತರಂಗಿತವಾದವು ....ಈಗ ನನಗೆ ತಿಳಿಯಿತು: ಹೊರಗಿನಿಂದಲ್ಲದೆ ಒಳಗಿನಿಂದಲೂ ಹುಕುಮು ಬರುತ್ತಿರುತ್ತವೆ. ನನ್ನ ಇಚ್ಛೆಯಿಂದಲೇ ಸರ್ವವೂ ನಡೆದಿರುತ್ತದೆಯೆಂದು ತಿಳಿದುಕೊಳ್ಳುತ್ತಿದ್ದೆನು. ನಾನು ಒಬ್ಬನೆ ಇದ್ದೇನೋ? ಮನಸವನ್ನು ಒಂದಿಷ್ಟು ಸ್ಥಿರಗೊಳಿಸಿದೊಡನೆಯೇ ಇಬ್ಬರ ನಡುವೆ ಸರ್ವದಾ ನಡೆದಿರುವ ಮಾತುಕತೆಗಳು ಕೇಳಿಸುತ್ತವೆ; ಇವರೇ ನನ್ನನ್ನು ನಡಿಸಿಕೊಂಡು ಒರುತ್ತಿದ್ದಾರೆ..ಇವರಲ್ಲಿ ಕುಮತಿಯು ನಾನು. ಸುಮತಿಯು ಯಾರು?....ಈ ವಿಷಯದಲ್ಲಿ ೨೭ ವರುಷಗಳ ಹಿಂದಿನ ಘಟನೆಯೊಂದು ನೆನಪಿಗೆ ಬರುತ್ತದೆ. ನಾನೆಂದೂ (ಲೇಖ ಮುಂತಾದವುಗಳನ್ನು) ಬರೆದಿದ್ದಿಲ್ಲ; ಆದರೆ ಒಳಗಿನಿಂದ ಯಾರೋ ಒಬ್ಬರು ಬರೆಯಲಿಕ್ಕೆ ಹಚ್ಚಿದರು. ಆತನ ಆಜ್ಞೆಯಿಂದಲೇ 'ಆಕಾಶ-ಸ್ಪಂದನ ಮತ್ತು ಅದೃಶ್ಯ ಪ್ರಕಾಶ' ಎಂಬ ವಿಷಯಗಳನ್ನು ಕುರಿತು ಬರೆದೆನು..... ಒಂದು ವರುಷದ ಹಿಂದೆ ಒಮ್ಮೊಮ್ಮೆ 'ಪರ ದೇಶಕ್ಕೆ ಹೋಗು' ಎಂದು ನಿರ್ದೇಶವು ಕೇಳಿಸಿತು. ಪರದೇಶ ಗಮನವೋ? ಅಲ್ಲಿ ನನ್ನನ್ನು ಯಾರು ಕೇಳಬೇಕು? ಆಗ ಕಠೋರ ಸ್ವರದಿಂದ— 'ನನ್ನ ಹೆಸರು ಹುಕುಮ್, ನಿನ್ನ ಹೆಸರು ಸೇವಕ! ಲಾಭಾಲಾಭವನ್ನು ಕುರಿತು ಹೇಳಲಿಕ್ಕೆ ನೀನಾರು?' ಎಂದು ಅಂದದ್ದು ಕೇಳಿಸಿತು. ಆಜ್ಞೆಯನ್ನು ಶಿರಸಾವಹಿಸಿದೆನು. ಆ ಮೇಲೆ ಎಲ್ಲ ನಿಟ್ಟಿನಿಂದ ಮುಚ್ಚಿದ (ದೈವದ) ಬಾಗಿಲುಗಳೆಲ್ಲ ತೆರೆದುಹೋದವು. ಯಾರ ಹುಕುಮಿನಿಂದ ಇದು ಆಯಿತು?'' *

---

* ದಿವಂಗತ ಸರ್ ಜಗದೀಶಚಂದ್ರ ಬೋಸರ "ಅವ್ಯಕ್ತ" ಎಂಬ ಪುಸ್ತಕದಿಂದ.

ಇಂತಹದೇ ಒಂದು ಸಮಾಚಾರವನ್ನು ನಾವು ಪ್ರಾಚೀನನಾದ ರತ್ನಾಕರಸಿದ್ಧನಲ್ಲಿ ಕಾಣುವೆವು. ಕಾವ್ಯ ನಾಯಕನು ಬಿಕ್ಕಟ್ಟಿನ ಪ್ರಸಂಗದಲ್ಲಿ ಸಿಕ್ಕುಬಿದ್ದಾಗ— 'ಶ್ರೀಹಂಸನಾಥ, ನೀನೇ ಬಲ್ಲೆ ಇದಕೆ ತ। ಕ್ಕೊಹೆಯಾವುದು ಸ್ವಾಮಿಯೆಂದಾ ॥ **ರೂಹಿಸಿತೊಂದು ದಿವ್ಯೋಪಾಯ;** ಗುರುವಿನ ಮಹಾತ್ಮೆಯೆಂದುರೆ ನಕ್ಕಾ ॥' .... ಒಳಗೆ ನಡೆದುದನ್ನು ಹೊರಗಿನವರೇನು ಬಲ್ಲರು? ಮಂತ್ರಿ ಮೊದಲಾದ ವರೂ ತಮಗೆ ತಿಳಿದಂತೆ ಉಪಾಯಗಳನ್ನು ಸೂಚಿಸಿದರು. ಅದಕ್ಕೆ ಆತನು— 'ನೀವು ಪೇಳ್ವುದು ಬುದ್ಧಿಯುಹುದು; ಆದರೆನ್ನ ಚಿದ್ಭಾವ ದೊಳೊಂದಾಯ್ತು ಬುದ್ಧಿ!' ಎಂದು ಉಸುರುವನು.

ಹಾಗೂ ಹೀಗೂ ಒದ್ದಾಡುತ್ತ ನಾವೀಗ ಅಂತರಂಗದ ಬಹು ಆಳವಾದ ಪ್ರದೇಶಕ್ಕೆ ಬಂದಂತಾಯಿತು. ಈ ಒಳನಾಡಿನಲ್ಲಿ ಪ್ರತ್ಯಕ್ಷ ವ್ಯವಹಾರವುಳ್ಳ ಯೋಗಿಗಳ, ಜ್ಞಾನಿಗಳ ಜೀವನವಂತೂ ಇಂಥ ಆಘಟಿತ ಸಂಗತಿಗಳ ಆಗರವೇ ಆಗಿರುತ್ತಿರುತ್ತದೆ. ನಮ್ಮ ದೇಶದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರ ಜಾಜ್ವಲ್ಯ ಜೀವನವು ಬುದ್ಧಿಯಾಚೆ ಗಿನ ಜ್ಞಾನಸದ್ದೊಂದು ಕುಬೇರನ ಬೊಕ್ಕಸವೇ ಆಗಿದೆ. ಅವರಿಗೆ ಯಾವ ಹೊತ್ತಿಗೆ ಯಾವದರ ತಿಳುವಳಿಕೆಯು ಅಗತ್ಯವುಂಟಾಗುತ್ತಿತ್ತೋ ತಕ್ಷಣದಲ್ಲಿ ಅವರಿಗೆ ಅದು ಬುದ್ಧಿಯ ಆಚೆಗಿನ ರಾಜ್ಯದಿಂದ ಕೊಡ ಲ್ಪಡುತ್ತಿದ್ದಿತು. ಆದರೂ ಅವರು ಅರಿತೂ ಅರಿಯದವರಂತೆ ತಮ್ಮನ್ನು ಕುರಿತು ಭಾವಿಸುತ್ತಿದ್ದರು. ಅದು ಹೇಗೆಂದರೆ— 'ಅಯ್ಯಾ, ನನಗೇನು ತಿಳಿದಿದೆಯೆಂದು ಇಷ್ಟೊಂದು ಜನರು ಇಲ್ಲಿಗೆ ಬರುತ್ತಿದ್ದಾರೆ' ಎಂದು ಒಂದೊಂದು ಸಲ ನನಗೆ ಯೋಚನೆಯುಂಟಾಗುತ್ತದೆ. ಆದರೆ ಪಂಡಿ ತರು 'ತಾವು ಅಪ್ಪಣೆಕೊಡಿಸುವದೆಲ್ಲವೂ ಶಾಸ್ತ್ರದಲ್ಲಿ ಇವೆ' ಎಂದು ಹೇಳುವರು'

ಶ್ರೀ ಶ್ರೀರಾಮಕೃಷ್ಣ ಪರಮಹಂಸರು ಒಂದು ಸಮಯದಲ್ಲಿ ಸ್ವಮುಖದಿಂದ ವಿವರಿಸಿದ ಸಂಗತಿಗಳಲ್ಲಿ ಕೆಲವನ್ನು ಇಲ್ಲಿ ನಿರೀಕ್ಷಿ ಸುವಾ—

'ನಾನು ಯಾರ ಸಂಗಡಲೋ ಮಾತಾಡುತ್ತಿದ್ದೆ. ಆಗ ನನಗೆ ಇದಿರಲ್ಲೇ ನಮ್ಮೂರ ಕೆರೆಯು ಕಾಣಿಸಿತು. ಅದರ ನೀರಿನ ಮೇಲೆ ಮುಚ್ಚಿಕೊಂಡಿದ್ದ ಪಾಚಿಯನ್ನು ಒತ್ತರಿಸಿ ಒಬ್ಬನು ನೀರನ್ನು ಕುಡಿಯುತ್ತಿದ್ದನು. ನೀರು ಸ್ಫಟಿಕದಂತೆ ಸ್ವಚ್ಛವಾಗಿದ್ದಿತು. ಈ ದೃಶ್ಯವನ್ನು ನನಗೆ ಶ್ರೀ ಮಾತೆಯೇ ತೋರಿಸಿದಳು. ಚಿದಾನಂದ ಸಾಗರವು ಮಾಯೆಯೆಂಬ ಪಾಚಿಯಿಂದ ಮುಚ್ಚಿಹೋಗಿರುತ್ತದೆ. ಆ ನೀರನ್ನು ಕುಡಿಯಬೇಕೆಂದು ಬಯಸುವವರು ಅದರ ಮೇಲೆ ಮುಚ್ಚಿಕೊಂಡಿರುವ ಆ ಪಾಚಿಯನ್ನು ಒತ್ತರಿಸಬೇಕು.'

ಈ ಮಾತನ್ನು ಪರಮಹಂಸರು ತಮ್ಮೊಬ್ಬ ಭಕ್ತನಿಗೆ ಈಶ್ವರನ ಅಗಾಧ ದೈವೀ ಮಾಯೆಯನ್ನು ಕುರಿತು ಬೋಧಿಸುವಾಗ ಹೇಳಿದ್ದಾರೆ.

ಚಿದಾನಂದ ಸಾಗರವು ಮಾಯೆಯೆಂಬ ಪಾಚಿಯಿಂದ ಮುಚ್ಚಿಹೋಗಿದೆಯೆಂದೂ, ಅದನ್ನರಿಯಲೆಳಸುವವನು ಆ ಮಾಯೆಯನ್ನು ದೂರಗೊಳಿಸಬೇಕಾಗುವದೆಂದೂ ಬೋಧಿಸಬೇಕಾಗಿ ಬಂದಾಗ ಎಲ್ಲಕ್ಕೂ ಮೊದಲಿಗೆ ಪರಮಹಂಸರ ಚಿತ್ತದಲ್ಲಿ ಅವರ ಊರ ಬಳಿಯಲ್ಲಿದ್ದ ಕೆರೆಯ ದೃಶ್ಯವು ಚಿತ್ರಿತವಾಯಿತು. ಅನಂತರ ಅದರ ಸಾದೃಶ್ಯದಿಂದ ಬೋಧವಚನವು ಉದಯವಾಯಿತು.

ತಮ್ಮೂರ ಕೆರೆಯ ಸ್ಮರಣವುಂಟಾಗುವುದಕ್ಕೆ ಆಗ ಕಾರಣವು ಯಾವುದೂ ಇರಲಿಲ್ಲ. ಕೇವಲ ಬೋಧವಚನದ ಉತ್ಪತ್ತಿಯ ಪೂರ್ವಗರ್ಭ ಪಿಂಡದಂತೆಯೇ ಅದು ಉದಯಿಸಿದ್ದಿತು. ಅಂತಲೇ ಅದನ್ನು ಜಗನ್ಮಾತೆಯೇ ತಮಗೆ ತೋರಿಸಿದಳೆಂದು ಹೇಳಿದ್ದಾರೆ.

ಇಂತಹದೇ ಇನ್ನೊಂದು ಸಂದರ್ಭವಿದೆ. ಒಮ್ಮೆ ನೆರೆದ ಭಕ್ತರಲ್ಲೊಬ್ಬನು–ಸಂಸಾರಿಗಳ ಆಧ್ಯಾತ್ಮವು ಹೇಗಿರಬೇಕೆಂದು ಕೇಳಲು– 'ಅಯ್ಯಾ, ಭತ್ತವನ್ನು ಕುಟ್ಟುವವಳು ಒಂದು ಕೈಯ್ಯಲ್ಲಿ ಒನಕೆಯನ್ನು ಹಿಡಿದು ಅದರಿಂದ ಕುಟ್ಟುತ್ತಲೂ, ಇನ್ನೊಂದು ಕೈಯ್ಯಿಂದ ಒರಳ ಸುತ್ತಲು ಸಿಡಿಯುವ ಕಾಳುಗಳನ್ನು ಒಳಗೆ ನೂಕುತ್ತಲೂ ಇರುವಂತೆ

ಒಂದು ಕೈಯ್ಯನ್ನು ಸಂಸಾರದಲ್ಲಿಯೂ ಇನ್ನೊಂದು ಕೈಯ್ಯನ್ನು ಆಧ್ಯಾತ್ಮದಲ್ಲಿಯೂ ಇರಿಸಿ ಒನಕೆಯಿಂದ ತನ್ನ ಕೈ ಜಜ್ಜಿಹೋಗದಂತೆ ಎಚ್ಚರಿಕೆಯಿಂದಿರಬೇಕು.' ಎಂದು ಪರಮಹಂಸರು ಹೇಳಿದರು. ಆಗ ಅಂತರಂಗದ ಶಿಷ್ಯರಲ್ಲೊಬ್ಬರು ತಮ್ಮ ಗುರುವಿಗೆ–ಸ್ವಾಮಿ, ತಾವು ಇಷ್ಟು ಥಟ್ಟನೆ ಹೇಗೆ ಈ ಉತ್ತರವನ್ನು ಹೇಳಿದಿರಿ? ಎಂದು ಕೇಳಿದನು. ಅದಕ್ಕೆ ಅವರು 'ಅಪ್ಪಾ, ಮಾತೆಯು ನನಗೆ ಆ ಚಿತ್ರವನ್ನು ತೋರಿಸಿದಳು. ಆದ್ದರಿಂದ ಥಟ್ಟನೆ ಹಾಗೆ ಹೇಳಲಿಕ್ಕಾಯಿತು.' ಎಂದರು.

ಭತ್ತ ಕುಟ್ಟುವವಳ ಚಿತ್ರವು ಚಿತ್ತದಲ್ಲಿ ಉದಯಿಸುವುದಕ್ಕೆ ಆಗ ಬಾಹ್ಯಕಾರಣಗಳು ಇನ್ನಾವುವೂ ಇರಲಿಲ್ಲ. ಅಲ್ಲದೆ ಅದು ಪ್ರಶ್ನವನ್ನು ಬಿಡಿಸುವುದಕ್ಕೆ ಯೋಗ್ಯವಾದ ನಿರ್ದೇಶವಾಗಿದ್ದಿತು. ಆದ್ದರಿಂದ ಜಗನ್ಮಾತೆಯೇ ಅದನ್ನು ದಯಪಾಲಿಸಿದಳೆಂದು ಹೇಳಿದರು.

ಇನ್ನೊಂದು ಕಲ್ಪನಾತೀತ ಪ್ರಸಂಗವನ್ನು ಪರಮಹಂಸರು ತಮ್ಮ ಶ್ರೀಮುಖದಿಂದಲೇ ಹೇಳಿರುವರು. ಅದು ಹೇಗೆಂದರೆ—

'ಜಪವನ್ನೂ ಧ್ಯಾನವನ್ನೂ ಮಾಡಬೇಕೆಂದು ನಾನು ಪಂಚವಟಿಯಲ್ಲಿ ತುಳಸೀ ವನವನ್ನು ಮಾಡಿದೆನು. ಅದಕ್ಕೆ ಗಳುವಿನ ಬೇಲಿಯನ್ನು ಹಾಕಬೇಕೆಂದು ಇಚ್ಛೆಯಾಯಿತು. ಗಂಗೆಯ ನೀರು ಉಕ್ಕಿ ಬಂದು ಆದರಲ್ಲಿ ಗಳು, ಹಗ್ಗ ಮುಂತಾದುವೆಲ್ಲ ತೇಲುತ್ತ, ಸರಿಯಾಗಿ ಪಂಚವಟಿಯ ಮುಂದುಗಡೆಯಲ್ಲಿಯೇ ಬಂದು ಬಿದ್ದವು. ದೇವಸ್ಥಾನಕ್ಕೆ ನೀರನ್ನು ತರುವವನು ಬಂದು ನನಗೆ ಆ ಸುದ್ದಿಯನ್ನು ಹೇಳಿದನು.' (ವಚನಾಮೃತ ಭಾಗ ೨ ಪು. ೧೫೫)

ಇವರಿಗೆ ಇಚ್ಛೆಯುಂಟಾಗುವುದಕ್ಕೂ, ಇಚ್ಛಿತವಸ್ತುಗಳು ಅದೇ ಕಾಲಕ್ಕೆ ತಾನಾಗಿ ಬರುವದಕ್ಕೂ ಬಾಹ್ಯಿಕ ಕಾರಣಗಳನ್ನು ಎಷ್ಟೂ ಕಲ್ಪಿಸಲಿಕ್ಕಾಗುವಂತಿಲ್ಲ. ಆದ್ದರಿಂದ ಇದನ್ನು ಹಾಗು ಇನ್ನುಳಿದ ಇಂಥ ಬೇರೆ ಸಂಗತಿಗಳನ್ನು ಅವರು ಮಾತೆಯ ಲೀಲೆಯೆಂದು ಭಾವಿಸಿದ್ದುದರಲ್ಲಿ ಆಶ್ಚರ್ಯವೇನು?

ಮತ್ತೊಂದು ಮಾತು :

"ನಾನೊಮ್ಮೆ ವಿಷ್ಣುಪುರಕ್ಕೆ ಹೋಗಿದ್ದೆನು. ಅಲ್ಲಿ ಪೂರ್ವ ಕಾಲದ ಒಂದು ದೇವಾಲಯವಿದೆ. ಅದರಲ್ಲಿ ಮೃಣ್ಮಯೀ ದೇವಿಯ ವಿಗ್ರಹವಿದೆ. ಆ ದೇವಾಲಯದ ಸಮೀಪದಲ್ಲಿ ದೊಡ್ಡದಾದ ಒಂದು ಕೆರೆಯಿದೆ. ನಾನು ಆ ಮೃಣ್ಮಯೀ ವಿಗ್ರಹವನ್ನು ನೋಡಿರಲಿಲ್ಲ. ಆದರೆ ಕೆರೆಯ ಹತ್ತಿರ ನನಗೆ ಸಮಾಧಿಭಾವವುಂಟಾಯಿತು. ಆಗ ನಡುವಿನ ವರೆಗೆ ಇರುವ ಮೃಣ್ಮಯೀ ದೇವಿಯ ದರ್ಶನವಾಯಿತು."

(ವಚನಾ. ಪು. ೭೭)

ಆದರೆ ಇದರ ಮುಂದಿನ ಸಮಾಚಾರವು ಇದಕ್ಕಿಂತ ವಿಚಿತ್ರ ವಾಗಿದೆ. ಅದೇನೆಂದರೆ ಪ್ರತ್ಯಕ್ಷವಾಗಿ ದೇವಾಲಯಕ್ಕೆ ಹೋಗಿ ನೋಡಿದಾಗ ಅಲ್ಲಿ ಬೇರೆ ವಿಧದ ವಿಗ್ರಹವಿದ್ದಿತು. ಅಲ್ಲಿರುವ ಜನರಿಗೆ 'ಇಲ್ಲಿ ಎಂದಿನಿಂದಲೂ ಇದೇ ಪ್ರತಿಮೆಯಿದ್ದಿತೋ?' ಎಂದು ವಿಚಾರಿಸಿದಾಗ 'ಇಲ್ಲ ಸ್ವಾಮಿ, ಮೊದಲಿದ್ದ ಮೂರ್ತಿ ಅರ್ಧ ಭಗ್ನ ವಾದ್ದರಿಂದ ಅದನ್ನು ಕೆರೆಯೊಳಗೆ ಮುಳುಗಿಸಿದ್ದಾರೆ' ಎಂದು ಅವರು ಹೇಳಿದರು.

ಪರಮಹಂಸರ ಕಾಮಿನೀ ಕಾಂಚನತ್ಯಾಗದ ವಿಷಯವು ಸರ್ವ ಶ್ರುತವಷ್ಟೆ? ವಿವೇಕಾನಂದರು ಪರೀಕ್ಷಿಸುವುದಕ್ಕೆಂದು ಒಂದು ಸಾರೆ ಪರಮಹಂಸರ ಹಾಸಿಗೆಯ ಕೆಳಗೊಂದು ಚಿಕ್ಕ ನಾಣ್ಯವನ್ನಿಟ್ಟಿರಲು, ಅದರ ಮೇಲೆ ಪರಮಹಂಸರು ಮಲಗಿಕೊಂಡಬಳಿಕ ಮೈಗೆ ಏನೋ ಕಚ್ಚಿರುವಹಾಗೆ ಒಮ್ಮೆಲೆ ಎದ್ದು ಹಾಸಿಗೆಯನ್ನು ಎತ್ತಿ ಕಾಲಿನಿಂದ ಆ ನಾಣ್ಯವನ್ನು ಚಿಮ್ಮಿದ್ದರಂತೆ. ಮತ್ತೊಮ್ಮೆ ವಿವೇಕಾನಂದರೇ ಪರಮಹಂಸರು ಗಾಢ ನಿದ್ರೆಯಲ್ಲಿರುವಾಗ ಅವರ ಅಂಗೈಯ ಮೇಲೊಂದು ದುಡ್ಡನ್ನು ಇಟ್ಟರಂತೆ. ಕೂಡಲೆ ಅವರ ಉಸಿರು ಕಟ್ಟಿ ದಂತಾಗಿ ಕೈಯು ಒಮ್ಮೆಲೆ ಅದನ್ನು ಎಸೆದುಬಿಟ್ಟಿತಂತೆ.

ಇನ್ನೊಂದು ಸಾರೆ ಒಮ್ಮೆ ಅವರಿಗೆ ಹೊಟ್ಟೆನೋವಾದಾಗ ಪಂಚವಟಿಯ ಸಮೀಪದಲ್ಲಿಯೇ ಇರುತ್ತಿದ್ದ ಒಬ್ಬ ಡಾಕ್ಟರನು

(ಇವನೂ ಭಕ್ತನು) ಅಫೀಮನ್ನು ಸೇವಿಸಲಿಕ್ಕೆ ಹೇಳಿದನು. ಕೆಲ ಹೊತ್ತಿನ ಮೇಲೆ ಪರಮಹಂಸರು ಅವನ ದವಾಖಾನೆಗೆ ಹೋದಾಗ ಆತನು ಎಲ್ಲಿಗೋ ಹೋಗಿಬಿಟ್ಟಿದ್ದನು. ಅವನ ಸೇವಕರಿದ್ದರು. ಪರಮಹಂಸರು ಅವರಿಗೇ ಅಫೀಮನ್ನು ಕೇಳಲು ಸೇವಕರು ಅದನ್ನು ಕೊಟ್ಟರು. ಆದರೆ ಅದನ್ನು ಕೈಯೊಳಗಿಟ್ಟುಕೊಂಡು ದಾರೀ ಹಿಡಿದ ಮೇಲೆ ಪರಮಹಂಸರಿಗೆ ಮುಂದಿನ ದಾರಿಯೇ ಕಾಣದಹಾಗೆ ಕಣ್ಣಿಗೆ ಕತ್ತಲುಗವಿಯಿತು. ಎಷ್ಟು ಪ್ರಯತ್ನಿಸಿದರೂ ದಾರಿ ಕಾಣಲೊಲ್ಲದು. ಹಿಂದಕ್ಕೆ ಹೊರಳಿ ನೋಡುತ್ತಾರೆ, ದಾರಿ ಕಾಣುತ್ತದೆ. ಆದರೆ ಮುಂದುಗಡೆ ನೋಡಿದರೆ ಮಬ್ಬು. ಆಗ ಅವರು ಆಲೋಚಿಸಿದ್ದೇನೆಂದರೆ—"ಸೇವಕರು ತಮ್ಮ ಒಡೆಯನಿಲ್ಲದಾಗ ಕೊಟ್ಟ ವಸ್ತುವನ್ನು ನಾನು ಸ್ವೀಕರಿಸುವುದು ಕಳವೇ ಸರಿ. ಆದ್ದರಿಂದ ಇದನ್ನು ತಿರುಗಿ ಅವರದವರಿಗೆ ಕೊಡಲುಬೇಕು." ಆಯಿತು ಅಷ್ಟು ಮಾಡಿದ ಮೇಲೆ ಮುಂದಿನ ದಾರಿಗೆ ಕವಿದಿದ್ದ ಕತ್ತಲು ಒಯಲಾಯಿತು.

ಅವರಿಗೆ ಅವಿದಿತವಾಗಿ ಇದೆಲ್ಲಾ ಹೇಗೆ ಘಟಿಸುತ್ತಿತ್ತು? ನಿದ್ರೆಯಲ್ಲಿ ಸಹ ನ್ಯಾಯ್ಯದ ಸಂದರ್ಭವು ಅವರಿಗೆ ಹೇಗೆ ಗೋಚರಿಸಿತು.

ಇದೇ ಬಗೆಯಿಂದ ಆಯರ್ಲಂಡಿನ ದ್ರಷ್ಟಾರರಾದ ಎ. ಈ. ಅವರ ಜೀವನದಲ್ಲಿ ವಿಪುಲ ಸಂಗತಿಗಳು ಘಟಿಸಿರುವುದನ್ನು ಅವರು ತಾನೇ ತಮ್ಮ ಪುಸ್ತಕದಲ್ಲಿ ಉಲ್ಲೇಖಿಸಿರುವರು. ಅದು ಹೇಗೆಂದರೆ:—

"ನನಗಾಗ ೧೭–೧೮ ವರುಷ ವಯಸ್ಸು. ಆಗ ನನ್ನ ತಲೆಯಲ್ಲಿ ನಿಚ್ಚಳವಾಗಿ ಕಲ್ಪನಾ ಚಿತ್ರಗಳು ತಾಕಲಾಡಹತ್ತಿದವು. ನಾನು ಅವುಗಳನ್ನೆಲ್ಲ ಒಣ್ಣದಿಂದ ಚಿತ್ರಿಸತೊಡಗಿದೆನು.......ಈ ಚಿತ್ರಗಳು ಬಾಲ ವಯಸ್ಸಿನವನಾದ ನನ್ನ ಕಾಲ್ಪನಿಕ ಮನೋರಾಜ್ಯದಲ್ಲಿ ಮೂಡಿದ್ದವಷ್ಟೆ? ಆದರೆ ಅವುಗಳಲ್ಲೊಂದನ್ನು ನೋಡಿದರೆ ದೈವೀ ಮಾನವನ ಪ್ರಥಮೋತ್ಪತ್ತಿಯು ದೇವನ ಚಿತ್ತದಲ್ಲಿ ಹೇಗೆ ಉಂಟಾಗಿರಬೇಕೆಂಬುದರ ಕಲ್ಪನೆಯೇ ಅದರಿಂದ ಧ್ವನಿತವಾಗುವ ಹಾಗೆ ನನ್ನ ಹೃದಯಕ್ಕೆ ಅನಿಸಹತ್ತಿತು. ಅಂದು ಇಡಿ ರಾತ್ರಿಯೆಲ್ಲಾ ನಾನು

ಅದನ್ನೇ ಆಲೋಚಿಸುತ್ತಿದ್ದೆನು. ಈ ಚಿತ್ರಮಾಲಿಕೆಯ ಕೆಳಗಡೆಗೆ ಯಾವ ಕಥೆಯೆಂದು ಬರೆಯಬೇಕೆಂಬುದರ ಕಡೆಗೇ ನನ್ನ ಚಿತ್ತವೆಲ್ಲಾ ತೊಡಗಿಕೊಂಡಿದ್ದಿತು. ಅಷ್ಟರಲ್ಲಿ ಊಹೆಗೆ ನಿಲುಕಲಾರದೊಂದು ಸಂಗತಿಯು ಘಟಿಸಿತು. ಆ ಕತ್ತಲೆಯ ಕೋಣೆಯಲ್ಲಿ ಯಾರೋ ಉಸಿರಾಡಿಸುತ್ತಿದ್ದಹಾಗೆ ಅನಿಸುತ್ತಿದ್ದಹಾಗೆಯೇ 'ಈಯನ್ನಿನ ಜನ್ಮವೆಂದು ಹೆಸರಿಡು' ಎಂದು ಪಿಸುಮಾತಿನಲ್ಲಿ ಹೇಳಿದಹಾಗಾಯಿತು. ನನಗೆ ಈ ಶಬ್ದವು (AEON) ಬಹಳೇ ಆಶ್ಚರ್ಯವನ್ನುಂಟುಮಾಡಿತು...

"ಮುಂದೆ ಹದಿನೈಸು ದಿನಗಳಲ್ಲಿ ನಾನು ನನ್ನ ಹಳ್ಳಿಯಿಂದ ಡಬ್ಲಿನ್ ಪಟ್ಟಣಕ್ಕೆ ಹೋದೆನು. ಅಲ್ಲಿ ವಾಚನಾಲಯಕ್ಕೆ ಹೋದಾಗ ವ್ಯವಸ್ಥಾಪಕನ ಮೇಜಿನಮೇಲೆ ಒಂದು ಪುಸ್ತಕವು ತೆರೆದು ಬಿದ್ದಿದ್ದಿತು. ನನ್ನ ದೃಷ್ಟಿಯು ಅದರ ಮೇಲೆ ಬಿದ್ದಾಗ ಮೊಟ್ಟಮೊದಲಿಗೆ ಆ ಪೂರ್ವೋಕ್ತವಾದ 'ಈಯಾನ್' ಎಂಬ ಶಬ್ದವೇ ಕಾಣಿಸಿತು. ಧರ್ಮ ಶಬ್ದಗಳ ಕೋಶವೆಂಬ ಆ ಪುಸ್ತಕದಲ್ಲಿ ಕಾಣಿಸಿದ ನನ್ನ ಶಬ್ದದ ಮುಂದೆ—ಪ್ರಥಮಜಾತ ಜೀವಿಗಳನ್ನು ಈ ಹೆಸರಿನಿಂದ ಒಂದು ಸಂಪ್ರದಾಯದವರು ಸಂಬೋಧಿಸಿರುವರು—ಎಂಬುದಾಗಿ ಬರೆದಿದ್ದಿತು. ಕೂಡಲೆ ನನ್ನ ಮೈಯೆಲ್ಲಾ ಕಂಪಿತವಾದಂತಾಯಿತು. ಆ ಕಾಲದಲ್ಲಿ ನಾನು ಬಾಲಕರೋದಬಹುದಾದ ಕಥೆ ಮೊದಲಾದವುಗಳಿಗಿಂತ ಹೆಚ್ಚಿನ ಯಾವ ಭಕ್ತಿಶಾಸ್ತ್ರವೇ ಮುಂತಾದ ಗ್ರಂಥಗಳನ್ನು ಓದಿರಲೇ ಇಲ್ಲ. ಅಲ್ಲದೆ ಕಲ್ಪನಾಶಕ್ತಿಯೆಂಬುದರಲ್ಲಿ ಕಾಲ್ಪನಿಕತೆಗಿಂತ ಹೆಚ್ಚಿನ ನಿಜಾಂಶವೇನಾದರೂ ಇರಬಲ್ಲದೆಂಬ ಕಲ್ಪನೆ ಕೂಡ ನನಗಾಗ ಇದ್ದಿದ್ದಿಲ್ಲ. ಅಲ್ಲದೆ ಆ ಶಬ್ದವನ್ನು ಹಿಂದೆ ನಾನೆಂದೂ ಕೇಳಿರಲಿಲ್ಲ......

"ಆಗ ನಾನು ನಂಬಿದ್ದೇನೆಂದರೆ,—ಮತ್ತು ಈಗಲೂ ನಂಬುತ್ತಿರುವುದೇನೆಂದರೆ— **ನಮ್ಮೊಳಗಿನ ನಾಶರಹಿತವಾದ ಅಮರ ಪುರುಷನಿಗೆ ತನ್ನ ಚಿರಂತನ ಸರ್ವ ಜ್ಞಾನದ ಸ್ಮರಣವಿರುತ್ತದೆ. ಅಲ್ಲದೆ ಆತ್ಮನ ಈ ಸ್ಮೃತಿಯೇ ಕಲ್ಪನಾಶಕ್ತಿಯೆಂಬುದರ ತಳಹದಿಯಾಗಿದೆ.**"

ಇದಲ್ಲದೆ ಅವರು ಇಂಥವೇ ಇನ್ನೂ ನಾಲ್ಕಾರು ಸಂಗತಿಗಳನ್ನು ಸಂಕ್ಷೇಪವಾಗಿ ಒಂದೆಡೆಯಲ್ಲಿ ಉಲ್ಲೇಖಿಸಿ ಯಾವುದೋ ಒಂದು ಆತ್ಮಿಕ ಗುರುತ್ವಾಕರ್ಷಣವು ( Law of spiritual gravitation) ಇವೆಲ್ಲ ಸಂಗತಿಗಳಿಗೆ ಕಾರಣವಾಗಿರಬೇಕೆಂದು ಊಹಿಸುವರು.

ಭೌತಿಕ ಶಾಸ್ತ್ರಜ್ಞರು ಪದಾರ್ಥಕ್ಕೆ ನಾಶವೇ ಇಲ್ಲವೆಂದು ಸಿದ್ಧಾಂತ ಮಾಡಿ ತೋರಿಸುತ್ತಿರುವಂತೆ ಅಧ್ಯಾತ್ಮ ಶಾಸ್ತ್ರಜ್ಞರು ಯಾವ ವಿಧದಿಂದಲೂ ನಾಶವೆಂಬುದೇ ಇಲ್ಲದಂಥ ವಸ್ತುವೊಂದಿದೆ ಯೆಂದು ಸ್ವಾನುಭವದಿಂದ ಸಾರಿಹೇಳುವರು. ಈ ಅಮರ ವಸ್ತುವೇ ದಿವ್ಯಜ್ಞಾನದ ಸೆಲೆಯೆಂದು ಅವರು ಪ್ರತಿಪಾದಿಸುವರು. ಅದು ಜೀವ ಜಡಗಳೆಂಬ ಭೇದವಿಲ್ಲದೆ ಸಮಸ್ತದಲ್ಲಿ ವ್ಯಾಪಿಸಿದೆಯೆಂಬುದು ಅವರ ಅನುಭವ. ವ್ಯಕ್ತಿಯೊಳಗಿನ ಅಮರ ವಸ್ತುವಿಗೂ ವಿಷಯದೊಳಗಿನ ಅಮರ ವಸ್ತುವಿಗೂ ಹೇಗೋ ಸಂಬಂಧ ಬಂದಕೂಡಲೆ ಊಹೆಗೆ ಸಿಲುಕದ ಜ್ಞಾನವು ಸ್ಫುರಿಸುವದಂತೆ. ಇದಲ್ಲದೆ ಶಕ್ತಿಯೆಂಬುದ ರಂತೆ ಜ್ಞಾನವೆಂಬುದೂ ಮಾನವನೊಳಗೆ ಸುಪ್ತದಶೆಯಲ್ಲಿ ಎಂದೆಂದಿ ನಿಂದಲೂ ಇದ್ದೇ ಇದೆಯೆಂದೂ ಅದನ್ನು ಸಾಧನ ವಿಶೇಷಗಳಿಂದ ಅರಳಿಸಿಕೊಳ್ಳಲಿಕ್ಕೆ ಬರುವದೆಂದೂ ಅವರು ಕಂಡು ಹಿಡಿದಿದ್ದಾರೆ.

ಸಾಮಾನ್ಯಮಾನವನಲ್ಲಿ ತರ್ಕಬುದ್ಧಿಯ ಪ್ರಾಬಲ್ಯದ ಮೂಲಕ ಅಂಥ ಸ್ವಾಭಾವಿಕ ಜ್ಞಾನವು ಕುಗ್ಗಿ ಹೋಗಿದೆಯೆಂತಲೂ, ಪಶುಗಳಿಗೆ ತರ್ಕ ಬುದ್ಧಿಯಿಲ್ಲದ್ದರಿಂದ ಅವುಗಳಲ್ಲಿ ಸಹಜಾತ ಜ್ಞಾನದ ಸಂಚರಣವು ಹೆಚ್ಚಾಗಿ ಉಳಿದಿದೆಯೆಂದೂ ನಿರ್ಧರಿಸಲಾಗಿದೆ. ದಾರಿಯಿಲ್ಲದಲ್ಲೇ ತಿರುಗಿ ತಮ್ಮ ಸ್ಥಳಕ್ಕೇ ಮೃಗಪಶುಗಳು ಹೇಗೆ ಬರುವವು ? ವಾಸನೆ ಯಿಂದಲೋ, ಸಪ್ಪಳಿನ ಮೇಲಿಂದಲೋ ಇರುಳಲ್ಲಿ ಸಹ ಪಶುಗಳು ವಿಶಿಷ್ಟವ್ಯಕ್ತಿಗಳನ್ನು ಹೇಗೆ ಗುರುತಿಸುವವು ?

ಚಿತ್ತವನ್ನು ಅತ್ಯಂತವಾಗಿ ಏಕಾಗ್ರಗೊಳಿಸುವ ಕಲೆಯು ನಮಗೆ ವಿದಿತವಾದರೆ ಆಗ ನಮಗೆ ವಿಪುಲಜ್ಞಾನವು ಅನಾಯಾಸವಾಗಿ ಲಭಿಸ ಬಲ್ಲದೆಂಬುದರ ಬಗೆಗೆ ಪಾತಂಜಲ ಯೋಗಶಾಸ್ತ್ರದ ವಿಭೂತಿಪಾದದಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಅದು ಹೇಗೆಂದರೆ:—

"ಸೂರ್ಯನ ವಿಷಯದಲ್ಲಿ ಚಿತ್ತವನ್ನು ಏಕಾಗ್ರಗೊಳಿಸಿದರೆ ಭುವನಜ್ಞಾನವೂ, ಚಂದ್ರನಮೇಲೆ ಏಕಾಗ್ರಗೊಳಿಸುವದರಿಂದ ತಾರಾವ್ಯೂಹಜ್ಞಾನವೂ, ಧ್ರುವತಾರೆಯ ಮೇಲೆ ಅದನ್ನು ಪ್ರಯೋಗಿಸುವದರಿಂದ ತಾರಾಗತಿ ಜ್ಞಾನವೂ ಲಭಿಸುವವು. ಭೂತಭವಿಷ್ಯದ್ವರ್ತಮಾನಗಳೆಂಬವುಗಳ ಮೇಲೆ ಚಿತ್ತೈಕಾಗ್ರತೆಯನ್ನು ಸಾಧಿಸುವದರಿಂದ ತ್ರಿಕಾಲ ಜ್ಞಾನವೂ, ಶಬ್ದದ ಅಂಗೋಪಾಂಗಗಳನ್ನು ಕುರಿತು ತನ್ಮಯತೆಯುಂಟಾದರೆ ಸರ್ವಭೂತ ಭಾಷಾಜ್ಞಾನವೂ ಸಂಸ್ಕಾರತತ್ವದ ಮೇಲೆ ಅದನ್ನು ಪ್ರಯೋಗಿಸುವದರಿಂದ ಪೂರ್ವಜನ್ಮಜ್ಞಾನವೂ ಪ್ರಾಪ್ತವಾಗುವವು. ಮೈತ್ರೀಗುಣದ ಮೇಲೆ ಚಿತ್ತದ ಏಕಾಗ್ರತೆಯನ್ನು ಸಾಧಿಸಿದರೆ ಆಯಾ ಶಕ್ತಿಗಳೂ, ಸಾಮರ್ಥ್ಯವೆಂಬುದರ ಮೇಲೆ ಚಿತ್ತವನ್ನು ಸ್ಥಿರಗೊಳಿಸುವದರಿಂದ ಆನೆಯ ಬಲವೂ ಪ್ರಾಪ್ತವಾಗುವವು. ನಾಭಿಚಕ್ರದ ಮೇಲೆ ತನ್ಮಯತೆಯನ್ನು ಸಾಧಿಸಿದರೆ ಕಾಯಾವ್ಯೂಹ ಜ್ಞಾನವೂ, ಮಸ್ತಕಜ್ಯೋತಿಯ ಮೇಲೆ ಚಿತ್ತವನ್ನು ಏಕಾಗ್ರಗೊಳಿಸುವದರಿಂದ ಸಿದ್ಧದರ್ಶನವೂ ಉಂಟಾಗುವವು. ಇತ್ಯಾದಿ, ಇತ್ಯಾದಿ'

ಮನದ ಏಕಾಗ್ರತೆ, ಬುದ್ಧಿಯ ಏಕತಾನತೆ, ಪ್ರಜ್ಞೆಯ ಏಕಾತ್ಮತೆ ಇವು ಮೂರಕ್ಕೇ ಧಾರಣಾಧ್ಯಾನ ಸಮಾಧಿಗಳೆಂತಲೂ, ಈ ಮೂರನ್ನೂ ಏಕಕಾಲಕ್ಕೆ ಪ್ರಯೋಗಿಸುವುದಕ್ಕೇ ಸಂಯಮವೆಂತಲೂ ಹೆಸರು. ಈ ಸಂಯಮಕ್ಕೇ ಚಿತ್ತದ ಏಕಾಗ್ರತೆಯೆಂದು ಮೇಲೆ ಹೇಳಲಾಗಿದೆ.

ಈ ಸಂಯಮವೆಂಬುದಕ್ಕೆ ಸ್ವಾಮಿ ಶ್ರೀ ವಿವೇಕಾನಂದರು ತಮ್ಮ ಪಾತಂಜಲ ವ್ಯಾಖ್ಯಾನದಲ್ಲಿ ಹೇಳಿದ ಅರ್ಥವಿವರವು ಮನನೀಯವಾಗಿದೆ. ಅದು—

'ವಸ್ತುವಿನ ಸ್ಥೂಲ ಆಕಾರವನ್ನು ಸರ್ವಥಾ ಪರಿತ್ಯಜಿಸಿ ಅದರ ಕೇವಲ ಸೂಕ್ಷ್ಮ ಕಾರಣರೂಪವಾದ ಆಕಾರದ ಕೂಡ ಮನವು ಏಕರೂಪವಾಗತೊಡಗಿತೆಂದರೆ ಮತ್ತು ದೃಢಾಭ್ಯಾಸದಿಂದ ಅದು ಅಲ್ಲಿಯೇ ಅಂಟಿಕೊಂಡು ಇರತೊಡಗಿತೆಂದರೆ ಅದಕ್ಕೆ ಸಂಯಮವೆಂದೆನ್ನುವರು. ಅಭ್ಯಾಸದಿಂದ ಅದರ ಅತ್ಯಂತ ದೃಢೀಕರಣವು ಸಾಧಿಸಿರಬೇಕಾಗುತ್ತದೆ.

ಯಾವದಾದರೊಂದು ವಸ್ತುವನ್ನು ಕುರಿತು ವಿಚಾರ ಮಾಡುವ ಅಗತ್ಯ ವುಂಟಾದೊಡನೆ ಕ್ಷಣಮಾತ್ರದಲ್ಲಿ ಮನವು ಆ ವಸ್ತುವಿನ ಸೂಕ್ಷ್ಮ ಸ್ವರೂಪದೊಡನೆ ಏಕರೂಪತೆಯನ್ನು ಹೊಂದಬೇಕಾಗುತ್ತದೆ; ಮತ್ತು ಅಲ್ಲಿಯೇ ಸ್ಥಿರವಾಗಿ ನಿಲ್ಲಬೇಕಾಗುತ್ತದೆ. ನಿಜವಾದ ಸಂಯಮವು ಇದೇ.' ( ಅಧ್ಯಾಯ ೩, ಸೂತ್ರ ೧೬ )

ಹೀಗೆ ಮನೋಬುದ್ಧಿಗಳ ಮುಖಾಂತರವಾಗಿ ತನ್ಮಯತೆಯನ್ನು ಸಾಧಿಸಲಿಕ್ಕೆ ಬರುವಂತೆ ಭಾವನಾಮುಖದಿಂದಲೂ, ಇಚ್ಛಾಶಕ್ತಿಯ ಮುಖದಿಂದಲೂ ಅದನ್ನು ಸಾಧಿಸಲಿಕ್ಕೆ ಬರುವದು. ಅರ್ಥಾತ್ ವಸ್ತು ವನ್ನು ಒಂದು ವ್ಯಕ್ತಿಯೆಂದು ಭಾವಿಸಿ ಅದರೊಡನೆ ಸಹಾನುಭೂತಿ ಯನ್ನು ಬೆಳೆಸುವದರಿಂದಲೂ, ಪ್ರಭುವಿನಂತೆ ವಸ್ತುವಿಗೆ 'ನಿನ್ನ ಅಂತ ರಂಗವನ್ನು ತೆರೆದು ತೋರಿಸು ' ಎಂದು ಶಾಸನವನ್ನು ವಿಧಿಸುವದ ರಿಂದಲೂ ಸಹ ಅದನ್ನು ಸಾಧಿಸಬಹುದೆಂದು ತೋರುತ್ತದೆ. ಪ್ರಿಯ ವ್ಯಕ್ತಿಯ ಮುಂದೆಯೂ, ದಂಡಧಾರಿಯ ಇದುರಿಗೂ ಮನುಷ್ಯರು ತಮ್ಮ ನಿಜಾಂಶವನ್ನು ವಿವರಿಸುವಂತೆ ವಸ್ತುಗಳೂ ತಮ್ಮ ಅಂತರಂಗ ವನ್ನು ತೆರೆದು ತೋರಿಸಬಲ್ಲವು. ಭಾಗವತದಲ್ಲಿ ಪೃಥುಚಕ್ರವರ್ತಿಯ ಕಥೆಯಲ್ಲಿ ಈ ಮಾತಿಗೆ ನಿದರ್ಶನಗಳಿವೆ.

ಆದರೆ ವಸ್ತುವಿನ ಅಂತರಂಗವೂ ತನ್ನ ಅಂತರಂಗವೂ ಮೂಲ ದಲ್ಲಿ ಒಂದೇ ತತ್ವದಿಂದ ಘಟಿತವಾದವುಗಳೆಂಬುದನ್ನು ಅರಿತು ಪರಸ್ಪರ ಐಕ್ಯವನ್ನು ಆತ್ಯಂತಿಕವಾಗಿ ಸಾಧಿಸುವದರಿಂದಲೇ ಸತ್ಯಜ್ಞಾನವು ಪ್ರಕಟವಾಗುವದೆಂದು ಗುರು ಅರವಿಂದರ ಅನುಭವ.

ರಾಜಯೋಗದ ಸಂಯಮವೆಂಬುದಕ್ಕೂ ಶ್ರೀ ಅರವಿಂದರ ಏಕಾತ್ಮತಾ ಪದ್ಧತಿಗೂ ಒಂದಿಷ್ಟು ಸಮೀಪ ಸಂಬಂಧವಿದೆ. ಈ ಮಾತನ್ನು ಸ್ವಂತ ಶ್ರೀ ಅರವಿಂದರೂ " ಯೋಗ ಸಮನ್ವಯ ( Synthesis of yoga ) ವೆಂಬ ಪ್ರಕಾಂಡ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

" This process is the basis of what Patangali calls

Samyama, a concentration. But the necessity of concentration becomes slight or nil when the active oneness grows."

(Ch. LXXI.)

"ಪತಂಜಲಿಯ ಸಂಯಮ ಅಥವಾ ಏಕಾಗ್ರತೆಗೆ (ಸನ್ನ) ಈ ಪದ್ಧತಿಯು ತಳಹದಿಯಾಗಿದೆ. ಆದರೆ ಸಂಪೂರ್ಣ ಸಕ್ರಿಯ ಏಕಾತ್ಮತೆಯು ವಿಕಾಸವಾದಮೇಲೆ ಈ ಏಕಾಗ್ರತೆಯೆಂಬುದರ ಆಗತ್ಯವು ಕಡಿಮೆಯಾಗುತ್ತದೆ. ಅಥವಾ ಅದರ ಅಗತ್ಯವೇ ತಪ್ಪಿಹೋಗುತ್ತದೆ"

*　　*　　*　　*

ನಾಸ್ತಿಕವಾದಿಗಳ ಐಂದ್ರಿಯಿಕ ಜ್ಞಾನ, ಅಜ್ಞೇಯವಾದಿಗಳ ಆತಂತ್ರ ಜ್ಞಾನ, ಶ್ರದ್ಧಾವಾದಿಗಳ ಸಾರ್ವತ್ರಿಕ ಜ್ಞಾನ, ಸಂಶೋಧಕರ ಅಂತರ್ಜ್ಞಾನ (Intuition), ಸಾಧಕರ ಸ್ವಾತ್ಮ ಜ್ಞಾನ, ಜ್ಞಾನಿಗಳ ದಿವ್ಯಜ್ಞಾನ, ಯೋಗಿಗಳ ಭವ್ಯ ಜ್ಞಾನ ಇವೆಲ್ಲವುಗಳ ಮೇಲೆ ಶ್ರೀ ಅರವಿಂದರ '**ಅತಿಮಾನಸ**'–'**ವಿಜ್ಞಾನ**' (Super mind). ಇಂದಿನ ನವ ಸಂತಾನವು ಇಂಥ ಅಖಂಡ ಜ್ಞಾನತೀರ್ಥದಲ್ಲಿ ಮನದಣಿ ಮಿಂದು, ಅಂತರಂಗದ ಅಮಲ ಪರಂಜ್ಯೋತಿಯನ್ನು ಬೆಳಗಿಸಿ, ಕಣ್ಣ ಮುಂದಿನ ಕಗ್ಗತ್ತಲನ್ನು ಹಾರಿಸಬೇಕು.

"First Kalee, then Surya."

**ಮೊದಲು ಕಾಲಿ, ಬಳಿಕ ಸೂರ್ಯ.**

— ಶ್ರೀ ಅರವಿಂದರು

**ಋತುಂಭರಾ ತತ್ರಪ್ರಜ್ಞಾ**

— ಬಗವಾನ್ ಪತಂಜಲಿ

ತತ್ ಸ್ವಯಂ ಯೋಗ ಸಂಸಿದ್ಧಃ

**ಕಾಲೇನ**

**ಆತ್ಮನಿ ವಿಂದತಿ ॥**

— ಗೀತೆ

ಓಂ ಸತ್ಯಂ ಋತಂ ಬೃಹತ್.

# ೩ ಪೂರ್ಣಯೋಗದ ಪೂರ್ವಸೂಚನೆ

ಭರತಖಂಡದ ನೂತನ ಧರ್ಮ ವಿಪ್ಲವದ ಮಂಗಳ ಪದ್ಯವೂ ನವ ಶಿಕ್ಷಿತರ ನಿರೀಶ್ವರ ವಾದದಿಂದಲೇ ಮೊದಲಾಯಿತು. ಬಳಿಕ ದಯಾನಂದ, ರಾಮ ಮೋಹನ, ದೇವೇಂದ್ರನಾಥರು ಬಹು ದೇವತಾವಾದ ಮತ್ತು ಮೂರ್ತಿ ಪೂಜೆಗೆ ಪ್ರತಿಭಟಿಸಿ, ನಿರಾಕಾರ ಏಕೇಶ್ವರ ವಾದವನ್ನು ಸಮರ್ಥಿಸಿದರಾದರೂ ಅನುಭವಿಕ ಆಸ್ತಿಕತೆಯು ರಾಮಕೃಷ್ಣರ ನಿಜಸಂಪತ್ತಾಗಿದೆ. ವೈಷಮ್ಯದ ವಿಷಮಾಂಧಕಾರದಲ್ಲಿ ಸಮನ್ವಯದ ಸತ್ಯಜ್ಯೋತಿಯನ್ನು ಮೊಟ್ಟಮೊದಲಿಗೆ ಕಂಡವರು ರಾಮಕೃಷ್ಣರೇ. ಆನಂತರ, ನೆಲಹಿಡಿದ ನಿಷ್ಕ್ರಿಯ ವೇದಾಂತವನ್ನು ಪುಟಗೊಳಿಸಿ ಕೋಣೆಯಿಂದ ಬೀದಿಗೆಳೆದವರು ವಿವೇಕಾನಂದ, ರಾಮತೀರ್ಥರು. ಹೀಗೊಮ್ಮೆ ಅಧ್ಯಾತ್ಮ ರಾಜ್ಯದ ತಳಹದಿಯು ಗಟ್ಟಿಯಾದ ಮೇಲೆ ಅದನ್ನೀಗ ಮುಂದುವರಿಸುವವರು ಮುಂದೆ ಬಂದಿದ್ದಾರೆ.

ಅನಿರ್ವಚನೀಯವನ್ನು ವಚನಕ್ಕಿಳಿಸಿ ಹೃದಯಂಗಮ ಗೊಳಿಸುತ್ತಿರುವವರು ರವೀಂದ್ರರು; ಏಕಾಂತ ಸುಲಭವಾದದ್ದನ್ನು ಲೋಕಾಂತದಲ್ಲಿ ಆಚರಿಸಿ ತೋರಿಸುತ್ತಿರುವವರು ಮಹಾತ್ಮಾಜಿಯವರು. ರವೀಂದ್ರರ ರಸಾನುಭೂತಿ, ಮಹಾತ್ಮರ ಸಹಾನುಭೂತಿ ಇವೆರಡರ ಪುಣ್ಯಪ್ರಭಾವದಲ್ಲಿ ಪಾವನವಾಗುತ್ತಿರುವದರಿಂದ ಭಾರತ ವರ್ಷವು ಅರವಿಂದರ ದಿವ್ಯಾನುಭೂತಿಗಾಗಿ ಭೂಮಿಕೆಯನ್ನು ಸಿದ್ಧಪಡಿಸಿಕೊಳ್ಳುತ್ತಲಿದೆ. **ಸಮಗ್ರತೆಯು ಭಾರತದ ಸಂಪತ್ತು.**

ಶ್ರದ್ಧೆಯು ಸತ್ವಾನುರೂಪವಾಗುತ್ತಿರುವದರಿಂದ, ಸತ್ವವು ಶುದ್ಧವಾದಂತೆ ಶ್ರದ್ಧೆಯು ಕಳೆಯೇರುವದು. ಸ್ವಭಾವವು ಸತ್ವದ ದ್ಯೋತಕವಾಗಿರುವದರಿಂದ ಸತ್ವದ ಪಲ್ಲಟವೆಂದರೆ ಸ್ವಭಾವದ ಮಾರ್ಪಾಡೇ. ಅಂದಿನ ನಿರೀಶ್ವರವಾದದಿಂದ ಇಂದಿನ ತಾತ್ತ್ವಿಕ

ಭಾವದ ವರೆಗೆ ಬೆಳೆಯುತ್ತ ಬಂದ ಶ್ರದ್ಧೆಯು ಭಾರತೀಯರ ಸ್ವಭಾವ ಪರಿವರ್ತನದ ನಿದರ್ಶನವಾಗಿದೆ.

ಮಾನುಷಸತ್ವವು ಮುಖ್ಯತಃ ಎರಡೇ ವಿಧವಾಗಿದೆಯೆಂದು ಹೇಳಬಹುದು. ಒಂದು ಜ್ಞಾನಪ್ರಧಾನ, ಇನ್ನೊಂದು ಶಕ್ತಿಪ್ರಧಾನ. ಒಂದು ಸಾತ್ವಿಕ, ಇನ್ನೊಂದು ರಾಜಸಿಕ. ಇವೆರಡೂ ಇಲ್ಲದ್ದೇ ಅಂಧಂತಮಸ್ಸು. ಈ ಮೂರನೆಯ ಭೂಮಿಕೆಯಲ್ಲಿ ತೋರಿಬರುವ ಶ್ರದ್ಧೆ ಅಂಧಶ್ರದ್ಧೆ. ತೋರಿಕೆಯಲ್ಲಿ ಅದು ಯಾವ ವರ್ಗದ ಶ್ರದ್ಧೆಯನ್ನಾದರೂ ಅನುಕರಿಸಬಹುದು; ಆದರೂ ನಿಜವಾಗಿ ಅದು ಕಗ್ಗತ್ತಲೆಯೇ. ಇಂದಿಗೊಂದು ಶತಮಾನದ ಹಿಂದೆ ಭರತಖಂಡದ ಜೀವನವು ಈ ಮೆಟ್ಟಲಿಗೆ ಇಳಿದಿತ್ತು. ಅದರಲ್ಲಿ ಶಕ್ತಿಪ್ರಧಾನವಾದ ರಜಃಪ್ರಕೃತಿಯ ನವಯುವಕರುಂಟಾದಂದಿನಿಂದ ಆ ಜಡತ್ವದಲ್ಲಿ ಚಲನ ವಲನವುಂಟಾಗಿ, ನಾಸ್ತಿಕತೆಯೂ ಸಂದೇಹವಾದವೂ ಮೊಳೆತವು. ಬಳಿಕ ಸತ್ವಪ್ರಧಾನ ಸಾಧಕರಿಂದ ಇಂದಿನ ಪಾರಮಾರ್ಥಿಕ ಶ್ರದ್ಧೆಯು ಕ್ರಮದಿಂದ ಬೆಳೆಯುತ್ತಿರುವದು.

ಇನ್ನೂ ಅಸಂಖ್ಯ ಅಂಧಶ್ರದ್ಧಾವಾದಿಗಳಿದ್ದಾರೆ; ಅನೇಕ ನಾಸ್ತಿಕ ಯುವಕರೂ ಇದ್ದಾರೆ. ಇವರ ಜೊತೆಜೊತೆಗೇ ತತ್ವಾನುರಾಗಿಗಳೂ ಹೊರಟಿದ್ದಾರೆ. ಅಂಧಶ್ರದ್ಧೆಯ ದುರ್ಘಟ ಪ್ರತಿಕ್ರಿಯೆಯು ಕುಂಟಾಗಿದೆ. ನಾಸ್ತಿಕ ಯುವಕರಿಗೆ ಮಹಾತ್ಮರ ಮತ್ತು ರವೀಂದ್ರರ ಗುಟುಕು ಸಿಗಹತ್ತಿದ್ದರಿಂದ ಅವರ ಪ್ರಕೃತಿಯು ಪಲ್ಲಟಿಸಹತ್ತಿದೆ. ಈ ಸತ್ವಶುದ್ಧಿಯ ಪ್ರಗತಿಯು, ಮುಂದೆ ಬರಲಿರುವ ಉನ್ನತಶ್ರದ್ಧೆಯ ಮತ್ತು ಉಚ್ಚಜೀವನದ ಮುಂಗುರುತಾಗಿದೆ.

ರಾಮಕೃಷ್ಣರ ಭಕ್ತಿಯನ್ನು ರವೀಂದ್ರರು ಹಾಡಿತೋರಿಸುತ್ತಿದ್ದರೆ, ವಿವೇಕಾನಂದರ ವೇದಾಂತವನ್ನು ಮಹಾತ್ಮರು ಮಾಡಿತೋರಿಸುತ್ತಿರುವ ಕಾಲವಿದು. ಅವರ ಮಾಧುರ್ಯ, ಇವರ ಗಾಂಭೀರ್ಯ, ಈ ತ್ಯಾಗಭೋಗದ ನಿಧಿಯು ಇಂದಿನ ನವಸಂತಾನಕ್ಕೆ ನಿರಾಯಾಸವಾಗಿ

ಪ್ರಾಪ್ತವಾಗಲಿರುವದು. ಅರವಿಂದರ ಯೋಗವು ಈ ಭೂಮಿಕೆಯಿಂದ ಮುಂದೆ ಮೊದಲಾಗುವದು.

ದೇವರಿದ್ದಾನೋ, ಇಲ್ಲವೋ? ಆತ್ಮವು ಅಮರವೋ, ಅಲ್ಲವೋ? ಪರಮಾತ್ಮನೂ ಪರಬ್ರಹ್ಮವೂ ಒಂದೆಯೋ ಭಿನ್ನವೋ? ನಿಜವಾದದ್ದು ದ್ವೈತವೋ ಅದ್ವೈತವೋ? ಮುಂತಾದ ವಿಷಮ ಪ್ರಶ್ನೆಗಳೊಡನೆ ಗುದ್ದಾಡುವುದಕ್ಕೆ ಅರವಿಂದರ ಯೋಗದಲ್ಲಿ ಆಶ್ರಯವಿಲ್ಲ. ಮತ್ತು ಜನನ-ಮರಣಗಳ ಭವಚಕ್ರದಿಂದ ಪಾರಾಗುವದೂ, ಭವರೋಗವನ್ನು ನೀಗಿಸಿಕೊಂಡು ಪರಾತ್ಪರದಲ್ಲಿ ಲಯವಾಗುವುದೂ ಅರವಿಂದರ ಯೋಗಕ್ಕೆ ಮಾನ್ಯವಿಲ್ಲ.

ವಿಶ್ವವು ಅಂಧಚಕ್ರವಾಗಿರದೆ ಅದು ಸಜ್ಞ ಸಂಚಲನವಾಗಿದೆ. ಅದು ಏಕಮೇವಾದ್ವಿತೀಯವಾಗಿ ಇದ್ದೂ ಕೂಡ ತಾನೇ ಬಹುತ್ವವನ್ನು ಧಾರಣಮಾಡಿದೆ. ಮನುಷ್ಯನಿಗೆ ತಾನು ಅಜ್ಞನೂ ಅಸಮರ್ಥನೂ ಇದ್ದೇನೆಂಬ ಅನಿಸಿಕೆಗೆ ಅವನ ಪ್ರಕೃತಿಗತ ಅಶುದ್ಧಿಯೇ ಕಾರಣವು. ಅವನ ಸತ್ವವು ಸಂಪೂರ್ಣ ಶುದ್ಧವಾದರೆ ಅವನ '**ಪರಾಪ್ರಕೃತಿ**'ಯಲ್ಲಿ ಅಹಂಕಾರ ರಹಿತವಾದ ಅಕ್ಷಯ ಜ್ಞಾನಶಕ್ತಿಗಳ ಸೆಲೆಯೊಡೆಯುವದು. ಆಗ ಅವನು ಅರಿತರಿತು ಬರುವ ಅವ್ಯರ್ಥ ಪ್ರೇರಣೆಯ ಆಗರವಾಗುವನು. ನಿರರ್ಥವೂ, ಅನರ್ಥವೂ ಅವನ ರಾಜ್ಯದಲ್ಲಿರಲಾರವು. ಅವನ ಪ್ರೇರಣೆಗೆ ಪ್ರತಿಭಟಿಸಿ ಪ್ರತಿಕೂಲವಾಗುವ ವ್ಯಕ್ತಿಗಳೂ, ಶಕ್ತಿಗಳೂ ಉಳಿಯಲಾರವು. ಅವನಿಗೆ ಆನಂದದ ಹೊರತು ಅನ್ಯ ಸಂಪರ್ಕವಿಲ್ಲ. ಒಟ್ಟಿಗೆ ಇವನೊಬ್ಬನು ವಿಶ್ವೇಶ್ವರಿಯ ಆಜ್ಞೆಯ ಸೇವಕನು!!! ಇವನೇ ಅರವಿಂದರೆನ್ನುವ **ಪೂರ್ಣಯೋಗಿ.**

ಈ ಅವಸ್ಥೆಗೆ ಬರುವದಕ್ಕೆ ಮನುಷ್ಯನಿಗೆ ಅವನ ಪರಂಪರಾಪ್ರಾಪ್ತವಾದ ಪ್ರಕೃತಿಗತ ಅಶುದ್ಧಿಯೇ ಅಂತರಾಯವಾಗಿದೆ. ಇದಕ್ಕೆ ಉಪಾಯವೆಂದರೆ, ವಿಶ್ವಸಂಚಾಲಕ ಮಹಾಶಕ್ತಿಗೆ ಅರಿತರಿತು ಅಧೀನವಾಗುವದೊಂದು; ಮತ್ತು ಆ ಶಕ್ತಿಯ ಕಿಡಿಯೇ ಆಗಿ ನಮ್ಮೊಳಗಡಗಿರುವ **ಸಂಕಲ್ಪಶಕ್ತಿ**ಯೆಂಬುದನ್ನು ನಮ್ಮ ಪ್ರಾಕೃತಿಕ ಸ್ವಭಾವದ

ಪ್ರತಿಪಕ್ಷಿಯನ್ನಾಗಿ ಎಬ್ಬಿಸಿ ನಿಲ್ಲಿಸುವುದು ಇನ್ನೊಂದು. ಇವೆರಡರ ಸರ್ವಾಂಗೀಣ ಪ್ರಯೋಗದಿಂದ ತಾನು ಆ **ಮಹಾಮಾತೆಯ** ದಿವ್ಯ ಕರ್ಮಿಯಾದ ಆಜ್ಞೇಯ್ಯ ಸೇವಕನಾಗುವದೇ ತನ್ನ ಜೀವನೋದ್ದೇಶ ವೆಂಬ ನಿಜಾಕಾಂಕ್ಷೆ ಮೂರನೆಯದು.

**ಸಮರ್ಪಣ, ಸಂಕಲ್ಪ, ನಿಜಾಕಾಂಕ್ಷೆ** ಇವೇ ಈ ಪೂರ್ಣ ಯೋಗದ ಸಾರ್ವಭೌಮಿಕ ಮಹಾವ್ರತಗಳು. ಸಮಸ್ತ ಮಾನವ ಕೋಟಿಯು ದಿವ್ಯಾನಂದದ ಅಧಿಕಾರಿಯಾಗಬೇಕೆಂಬುದೇ ಈ ಯೋಗದ ಧ್ಯೇಯವು ! ! !

**ಓಂ ಶ್ರೀ ಓಂ**

AUM

# ಪೂರ್ಣಯೋಗ

*You are the individual God*

*and He is the universal God*

*Sri Aurobindo*

Aum

# ಪೂರ್ಣಯೋಗ

## ಓಂ ಶ್ರೀ ಓಂ

## ೧ ಶಕ್ತಿ

ಪ್ರಕರಣೋಪಕ್ರಮಣಿಕೆ:—

ಗುರು ಅರವಿಂದರೇ ಇನ್ನೊಂದೆಡೆಯಲ್ಲಿ ಹೇಳಿದ್ದೇನೆಂದರೆ:—

"ನಮ್ಮವರಿಗೆ ಆಧ್ಯಾತ್ಮಿಕ ಪ್ರವೃತ್ತಿಯಿದೆ, ಆದರೆ ಅದು ನಮ್ಮ ಪೂರ್ವಜರ ಪುಣ್ಯದಿಂದ; ಮತ್ತು ಯಾರಿಗೆ ಈ ಅನುಭೂತಿಯಿದೆಯೋ ಅವರ ಕೈಯ್ಯೊಳಗೆ ಸಮಸ್ತ ಆಸುರಿಕ ಶಕ್ತಿಯನ್ನು ಒಂದು ಫೂತ್ಕಾರಮಾತ್ರದಿಂದ ತೃಣದಂತೆ ಹಾರಿಸಿಬಿಡಬಲ್ಲ ಜ್ಞಾನವೂ, ಶಕ್ತಿಯೂ ಇರುತ್ತವೆ. ಆದರೆ ಆ ಶಕ್ತಿಯನ್ನು ಪಡೆಯಬೇಕಾದರೆ ಶಕ್ತಿಯ ಉಪಾಸನೆಯು ಆವಶ್ಯಕ. ನಾವಾದರೋ

ಶಕ್ತಿಯ ಉಪಾಸಕರಲ್ಲ, ಸಹಜದ ಉಪಾಸಕರು; ಸಹಜದಲ್ಲಿ ಶಕ್ತಿಯು ಲಭಿಸಲಾರದು. ನಮ್ಮ ಪೂರ್ವಪುರುಷರು ವಿಶಾಲವಾದ ವಿಚಾರಸಮುದ್ರದಲ್ಲಿ ಈಸಿ ವಿಸ್ತಾರವಾದ ಜ್ಞಾನವನ್ನು ಪಡೆದಿದ್ದರು; ವಿಶಾಲವಾದ ಸಂಸ್ಕೃತಿಯನ್ನು ಸ್ಥಾಪಿಸಿದ್ದರು. ಅವರು ದಾರಿನಡೆಯುತ್ತ ನಡೆಯುತ್ತ ದಣಿದು ಕ್ಲಾನ್ತರಾಗಲು ವಿಚಾರದ ವೇಗವು ಕಡಿಮೆಯಾಗಿ ಹೋಯಿತು; ಅದರ ಜೊತೆಜೊತೆಗೆ ಶಕ್ತಿಯ ವೇಗವೂ ಕೂಡ ಕುಂಠಿತವಾಗಿ ಹೋಯಿತು. ನಮ್ಮ ಸಂಸ್ಕೃತಿಯು ಚಲನವಲನ ರಹಿತವಾದ ಜಡವಸ್ತುವಾಯಿತು, ಧರ್ಮವು ಹೊರಗಿನ ಬಂಧನಮಾತ್ರವಾಗಿ ಬಿಟ್ಟಿತು. ಅಧ್ಯಾತ್ಮಭಾವವೊಂದು ಜಿಣಿಮಿಣಿ ದೀಪವಾಗಿ ಕ್ಷಣಿಕ ಉನ್ಮಾದದ ಲಹರಿಯಾಯಿತು. ಎಷ್ಟುಕಾಲ ಈ ಅವಸ್ಥೆ ಉಳಿಯುವುದೋ ಅಷ್ಟುದಿನ ಭರತಖಂಡದ ಸ್ಥಿರವಾದ ಪುನರುತ್ಥಾನವು ಅಸಂಭವವು..... ವಿಚಾರಮಾಡದೆ ಜ್ಞಾನ, ಪರಿಶ್ರಮ ಮಾಡದೆ ಫಲ, ಸಹಜ ಸಾಧನೆಯಿಂದಲೇ ಸಿದ್ಧಿ- ನಾವು ಬಯಸಹತ್ತಿರುವುದು ಇದು. ಇದರ ಪ್ರತಿಫಲವೆಂದರೆ ಭಾವನೆಯ ಚಲ್ಲಾಟ. ಆದರೆ ಜ್ಞಾನಶೂನ್ಯವಾದ ಭಾವಾತಿಶಯವು ರೋಗದ ಲಕ್ಷಣವಾಗಿದೆ. ಆಮೇಲೆ ದಣಿವು, ತಮೋಭಾವ. ಈ ನಿಟ್ಟಿನಿಂದ ಕ್ರಮವಾಗಿ ದೇಶದ ದುರ್ಗತಿ; ಜೀವನಶಕ್ತಿಯ ಹ್ರಾಸ........ ಶಕ್ತಿಸಾಧನೆಯನ್ನು ಬಿಟ್ಟುಗೊಟ್ಟಿದ್ದೇವೆ, ಶಕ್ತಿಯೂ

ನಮ್ಮನ್ನು ಬಿಟ್ಟುಗೊಟ್ಟಿದ್ದಾಳೆ. ಪ್ರೇಮದ ಸಾಧನೆಗೆ ಪ್ರವೃತ್ತರಾಗಿದ್ದೇವೆ, ಆದರೆ ಎಲ್ಲಿ ಜ್ಞಾನವೂ, ಶಕ್ತಿಯೂ ಇಲ್ಲವೋ ಅಲ್ಲಿ ಪ್ರೇಮವೂ ಇರಲಾರದು. ಅದರಿಂದ ಸಂಕೀರ್ಣತೆಯೂ ಕ್ಷುದ್ರತೆಯೂ ಬರುತ್ತವೆ. ಕ್ಷುದ್ರವಾದ ಸಂಕೀರ್ಣವಾದ ಮನ-ಪ್ರಾಣ-ಹೃದಯಗಳಲ್ಲಿ ಪ್ರೇಮಕ್ಕೆ ಸ್ಥಾನವಿಲ್ಲ. ........ಆರ್ಯ ಜನಾಂಗದ ಉದಾರವಾದ ವೀರಯುಗದಲ್ಲಿ ಈಗಿನಂಥ ಗಲಾಟೆಯೂ ಓಡಾಟವೂ ಇರಲಿಲ್ಲ. ಅವರು ಯಾವ ಪ್ರಯಾಸಕ್ಕೆ ತೊಡಗುತ್ತಿದ್ದರೋ ಅದು ಬಹು ಶತಮಾನಗಳವರೆಗೆ ತಾಳಿ ಬಾಳುತ್ತಿತ್ತು. ನಮ್ಮ ಪ್ರಯಾಸಗಳೋ ಎರಡು ದಿನ ಸಹ ಸ್ಥಿರವಾಗಿ ಉಳಿಯುವದಿಲ್ಲ........ ಆದುದರಿಂದಲೇ ನನ್ನ ಯೋಗದ ತಳಹದಿಯನ್ನು ನಿರ್ಮಿಸುವುದಕ್ಕೆ ವಿಶಾಲವಾದ ವೀರಸಮತೆಯನ್ನು ಬೇಡುತ್ತೇನೆ. ಆ ಸಮತೆಯಲ್ಲಿ ನೆಲೆಗೊಂಡ ಆಧಾರದಲ್ಲಿಯೇ (ದೇಹ-ಪ್ರಾಣ-ಚಿತ್ತ ಮನ-ಬುದ್ಧಿಗಳಲ್ಲಿಯೇ) ಸಕಲವೃತ್ತಿಗಳೊಳಗೆ ಪೂರ್ಣವಾದ, ದೃಢವಾದ, ಅಚಲವಾದ ಶಕ್ತಿಯುಂಟು; ಆ ಶಕ್ತಿ-ಸಮುದ್ರದಲ್ಲಿಯೇ ಜ್ಞಾನಸೂರ್ಯನ ಕಿರಣಗಳ ವಿಸ್ತಾರವು; ಆ ಪ್ರಕಾಶಮಯವಾದ ವಿಸ್ತಾರದಲ್ಲಿಯೇ ಪಾರವಿಲ್ಲದ ಪ್ರೇಮ, ಆನಂದ, ಐಕ್ಯಗಳ ಸ್ಥಿರವಾದ ತನ್ಮಯತೆಯು.... ”

[ ಮೇಲಿನ ಮಂತ್ರವಾಣಿಯಲ್ಲಿ ಶ್ರೀ ಅರವಿಂದ ಯೋಗಿಗಳ ಸರ್ವಸಾಧನ ತಂತ್ರವು ತುಂಬಿಕೊಂಡಿದೆ. ಅಜೇಯವಾದ ಆತ್ಮಶಕ್ತಿಯನ್ನು ಗಳಿಸುವದೇ ಅವರ ಸಾಧನದ ಉದ್ದೇಶ. ಈ ಅರ್ಥದಿಂದಲೇ ಅವರು ತಮ್ಮ "ಪೂರ್ಣಯೋಗ" ವೆಂಬುದಕ್ಕೆ ಪ್ರಸ್ತುತ ಗ್ರಂಥದಲ್ಲಿ "ಶಕ್ತಿಮಾರ್ಗ" ವೆಂದೂ "ತಂತ್ರಪಥ" ವೆಂದೂ ಕರೆದಿದ್ದಾರೆ. ಗ್ರಂಥಾರಂಭಕ್ಕೇ ಇಂಥ ದಿವ್ಯ ಶಕ್ತಿಯ ಉಪಾಸನೆಯ ಗುಟ್ಟನ್ನು ಬಿಚ್ಚಿಟ್ಟಿದ್ದಾರೆ. ಅವರ ಶಕ್ತಿಉಪಾಸನೆಯ ಅರ್ಥವು ಹೀಗೆ ಇದೆ. ]

ಉಚಿತ ಸಾಧನಪದ್ಧತಿಯು ತೀರ ಭಿನ್ನವಿದೆ. ಇದೀಗ ಬಹು ಜನರು ನಡಿಸಿರುವ ಮತ್ತು ನೀವು ಸಹ ಮಾಡುತ್ತಿರುವ ಸಾಧನ ಪದ್ಧತಿಗೆ ಇದು ತುಂಬಾ ವಿಪರೀತವಾಗಿದೆ. ಜನರು ದೇಹ ಇಲ್ಲವೆ ಪ್ರಾಣದಿಂದ ಆರಂಭಿಸಿ, ಚಿತ್ತ ಮನಸ್ಸುಗಳ ಕಡೆಗೆ ಸಾಗಿ ಬುದ್ಧಿ ಮತ್ತು ಶಕ್ತಿಗೆ ಮುಗಿತಾಯಗೊಳಿಸುತ್ತಾರೆ. ಆದರೆ ನಿಜವಾದ ಕ್ರಮವು ಶಕ್ತಿಯಿಂದ ಆರಂಭಿಸಿ ದೇಹಕ್ಕೆ ಮುಗಿಸುವುದಾಗಿದೆ.

ಆಸನ, ಪ್ರಾಣಾಯಾಮ, ಕುಂಭಕ, ಚಿತ್ತಶುದ್ಧಿ‡ ಅಥವಾ ಇನ್ನಾವ ಪ್ರಾಥಮಿಕಪಾಠ ಇವು ಯಾವವೂ ಶಕ್ತಿಯನ್ನು ಮೊದಲು ಮಾಡಿಕೊಂಡು ಹೊರಡುವವರಿಗೆ ಅಗತ್ಯವಿಲ್ಲ. ಯೋಗದ ವಿಷಯದಲ್ಲಿ ಶ್ರೀ ರಾಮಕೃಷ್ಣ ( ಪರಮಹಂಸ ) ರು ಇದನ್ನೇ ತೋರಿಸಿಕೊಡುವುದಕ್ಕಾಗಿ ಬಂದರು. ಅವರು ಹೇಳಿದ್ದೇನಂದರೆ:— "ಮೊದಲಿಗೆ ಶಕ್ತಿ ಉಪಾಸನೆಯನ್ನು ಮಾಡು. ಶಕ್ತಿಯನ್ನು ಗಳಿಸಿದರೆ ಅವಳು ಸತ್ತ§ನ್ನು

‡ ಚಿತ್ತಶುದ್ಧಿ—ಚಿತ್ತವೃತ್ತಿ ನಿರೋಧ

§ ಸತ್—ಪರಶಿವ, ಪರಬ್ರಹ್ಮ, ಸತ್ತಾಮಾತ್ರ ಸ್ಥಿತಿ

ದಯಪಾಲಿಸುವಳು.'' ಸಂಕಲ್ಪ ಮತ್ತು ಶಕ್ತಿ ಇವೆರಡೂ ಯೋಗಿಗೆ ಮೊಟ್ಟಮೊದಲಿಗೆ ಬೇಕಾದವುಗಳು. ಅಂತಲೇ ಅವರು— ''ನೀನು ಬ್ರಹ್ಮನೇ ಇರುವಿಯೆಂಬುದನ್ನು ನೆನಿಸಿಕೋ'' ಎಂದು ಯಾವಾಗಲೂ ಹೇಳುತ್ತಿದ್ದರು. ಇದನ್ನೇ ಅವರು ಸ್ವಾಮಿ ವಿವೇಕಾನಂದರಿಗೆ ಮುಖ್ಯ ಸಂದೇಶವೆಂದು ಕೊಟ್ಟರು. ನೀನು ಈಶ್ವರನಿರುವಿ. ನೀನು ಆಗಬೇಕೆಂದು ಅಪೇಕ್ಷಿಸಿದರೆ ಶುದ್ಧನೂ ಸಿದ್ಧನೂ ಆಗಬಲ್ಲಿ. ಇನ್ನೇನ್ನಾಗಬೇಕೆಂದರೂ ಆಗುವಿ. ಆದರೆ ನೀನು ಬಯಸಿದರೆ ಇದಕ್ಕೆ ವಿಪರೀತವಾದರೂ ಕೂಡ ಆಗಬಲ್ಲಿ.

**ಎಲ್ಲಕ್ಕೂ ಮೊದಲನೆಯ ಅಗತ್ಯವೆಂದರೆ ನಿಮ್ಮ ಬಗೆಗೆ ನಿನಗೆ ನಂಬುಗೆಯುಂಟಾಗಬೇಕು,** ಎರಡನೆಯದು ದೇಹವನ್ನು ಕುರಿತು, ಮೂರನೆಯದು (ದೇವಾಧಿದೇವನ ಅಜೇಯ ಮಹಾಶಕ್ತಿ ಸ್ವರೂಪಳಾದ) ಮಹಾಕಾಲಿಯನ್ನು ಕುರಿತು ನಿಮಗೆ ಶ್ರದ್ಧೆಯುಂಟಾಗ ಬೇಕು. ಯಾಕೆಂದರೆ ಇವುಗಳಿಂದಲೇ ಜಗತ್ತು ಹುಟ್ಟಿದೆ.

ಸಂಕಲ್ಪ ಶಕ್ತಿಯನ್ನು (Will) ಮೊದಲಿಗೆ ಅಭ್ಯಾಸಮಾಡಿರಿ. ಆ ಶಕ್ತಿಯ ಮುಖಾಂತರವಾಗಿ ಜ್ಞಾನವನ್ನು ಸಾಧಿಸಿರಿ. ಬಳಿಕ ಜ್ಞಾನದ ಸಹಾಯದಿಂದ ಚಿತ್ತವನ್ನು ಶುದ್ಧಗೊಳಿಸಿರಿ, ಪ್ರಾಣವನ್ನು ವಶಗೊಳಿಸಿರಿ, ಮನವನ್ನು ಶಾಂತಗೊಳಿಸಿರಿ. ಇವೆಲ್ಲ ಯಂತ್ರಗಳ ನೆರವಿನಿಂದ ದೇಹವನ್ನು ಅಮರಗೊಳಿಸಿರಿ.

ಇದುವೆ ವಾಸ್ತವಿಕವಾದ ಯೋಗವು, ಮಹಾಪಥವು. ಇದುವೆ ನಿಜವಾದ ಏಕಮಾತ್ರ ತಂತ್ರವು. ವೇದಾಂತವು ಬುದ್ಧಿಯನ್ನು ಮೊದಲ ಮಾಡಿಕೊಂಡು ಹೊರಡುತ್ತದೆ; ಆದರೆ ತಂತ್ರವು **ಶಕ್ತಿ**ಯಿಂದ ಆರಂಭಿಸಲ್ಪಡುವದು.

ಸಂಕಲ್ಪಶಕ್ತಿ (Will) ಯೆಂದರೆ ಏನೆಂಬುದನ್ನು ನೀವು ಕೇಳಿದ್ದೀರಿ. ಅದು **ಶಕ್ತಿ**ಯಿದೆ, ವಾಸನೆಯಲ್ಲ; ಅದು ಹೋರಾಟವೂ ಅಲ್ಲ. ವಾಸನೆ ಮತ್ತು ಹೋರಾಟ ಇವು ಸಂಕಲ್ಪಶಕ್ತಿಯ ನಿಷ್ಕ್ರಿಯ

ರೂಪಗಳಾಗಿವೆ. ನಿಮ್ಮಲ್ಲಿ ವಾಸನೆಯಿದೆಯೆಂದರೆ ನಿಮ್ಮ ಸಂಕಲ್ಪ ಶಕ್ತಿಯ ಸಾಮರ್ಥ್ಯದ ಬಗೆಗೆ ನೀವು ಸಂದೇಹಪಡುತ್ತೀರೆಂದ ಹಾಗೆಯೆ. ಬ್ರಹ್ಮನಿಗೆ ವಾಸನೆಯಿಲ್ಲ. ಆತನು ಸಂಕಲ್ಪಿಸುತ್ತಾನೆ; ಸಕಲ ಸಂಗತಿಗಳು ಆತನ ಸಂಕಲ್ಪಾನುಸಾರವಾಗಿ ವರ್ತಿಸುತ್ತವೆ.

ನಿಮ್ಮಲ್ಲಿ ಹೋರಾಟವಿದ್ದುದಾದರೆ ನೀವು ನಿಮ್ಮ ಸಂಕಲ್ಪ ಶಕ್ತಿಯ ಬಗೆಗೆ ಸಂದೇಹಪಡುವಿರೆಂದೇ ಅರ್ಥವಾಗುತ್ತದೆ. ಯಾರಿಗೆ ತಾವು ಬಲಶಾಲಿಗಳಲ್ಲವೆಂದು ಅನಿಸಿದೆ ಮತ್ತು ತಿಳಿದಿದೆಯೋ ಅಂಥವರು ಮಾತ್ರ ಫಲ-ಪರಿಣಾಮಗಳಿಗಾಗಿ ಹೋರಾಡುತ್ತಾರೆ; ಮತ್ತು ಶ್ರಮಪಡುತ್ತಾರೆ. ಬ್ರಹ್ಮನಿಗೆ ಹೋರಾಟವಿಲ್ಲ. ಆತನು ಸಂಕಲ್ಪಿಸುತ್ತಾನೆ; ಮತ್ತು ಆತನ ಸಂಕಲ್ಪವು ಅನಾಯಾಸವಾಗಿ ಫಲ-ಪರಿಣಾಮಗಳನ್ನು ಹುಟ್ಟಿಸಿಬಿಡುತ್ತದೆ. ಆದರೆ ಕಾಲ, ಸ್ಥಾನ, ನಿಮಿತ್ತಗಳನ್ನು ನೋಡಿಕೊಂಡು ಅದು ಹುಟ್ಟಿಸುತ್ತದೆ.

ಆದುದರಿಂದ ಫಲ-ಪರಿಣಾಮವು ಈಗಲೆ, ಇಲ್ಲಿಯೆ, ಹೀಗೆಯೇ ಆಗಬೇಕೆಂದು ಬೇಡುವುದು ಅಜ್ಞಾನವಾಗಿದೆ. ಪ್ರತಿಯೊಂದು ಸಂಗತಿ ಮತ್ತು ಅವರ ಬೆಳವಣಿಗೆ ಇವುಗಳ **ಕಾಲ, ಸ್ಥಾನ, ಕಾರಣಾದಿಗಳು ಯುಗಯುಗಗಳ ಮುಂಚೆ ಕಲ್ಪಾರಂಭದಲ್ಲಿಯೇ ಸ್ವಂತ ನಿಮ್ಮಿಂದಲೂ, ಪರಮೇಶ್ವರನಿಂದಲೂ ನಿರ್ಧಾರಿತವಾಗಿವೆ.** ನೀವೇ ನಿರ್ಧರಿಸಿದ್ದನ್ನು ತಿರುಗಿ ನೀವೇ ಬದಲಿಸುವುದಕ್ಕೆ ಹೋರಾಡುವುದೂ ಯತ್ನಿಸುವುದೂ ಅಜ್ಞತೆಯು. ಕಾಲ, ಸ್ಥಾನ, ಸ್ಥಿತಿಗಳನ್ನು ಕುರಿತು ಚಿಂತಿಸದಿರಿ; ಆದರೆ ಸಂಕಲ್ಪಿಸಿರಿ, ಮತ್ತು ಫಲ-ಪರಿಣಾಮವನ್ನು ನಿಮ್ಮ ಒಳಗಿನ ಸರ್ವಸಮರ್ಥನೂ, ಸರ್ವಾಂತರ್ಯಾಮಿಯೂ, ಸರ್ವಜ್ಞನೂ ಆದ ದೇವನ ಕಡೆಗೆ ಬಿಟ್ಟುಕೊಡಿರಿ.

**ನೀನು ವ್ಯಕ್ತಿಗತ ದೇವನಿರುವಿ, ಆತನು ವಿಶ್ವಗತ ದೇವನಿದ್ದಾನೆ.** ದೇವನಲ್ಲದೆ ಇನ್ನೇನೂ ಇಲ್ಲ–ಏಕಮೇವಾದ್ವಿತೀಯಮ್. ಆದ್ದರಿಂದ ಸಂಕಲ್ಪಶಕ್ತಿಯ ಅರ್ಥವು ಸಮತೆಯೇ ಸರಿ ವಾಸನೆ ಮತ್ತು ಹೋರಾಟಗಳ ಅಭಾವವೇ ಸಮತೆ. ಈ ವಾಸನೆ

ಮತ್ತು ಹೋರಾಟ ಇವುಗಳ ಅಭಾವದಶೆಯೇ ಜ್ಞಾನವು. ಜ್ಞಾನ ವುಂಟಾಗುವವರೆಗೆ ವಾಸನೆ ಮತ್ತು ಹೋರಾಟಗಳ ಪುನರಾವರ್ತನ ವನ್ನು ತಪ್ಪಿಸಿಕೊಳ್ಳುವುದಕ್ಕಾಗುವದಿಲ್ಲ.

ಹೇಗೆ ಹೊರಡಬೇಕೆಂಬುದೇ ಒಂದು ಪ್ರಶ್ನೆ. ನಿಮ್ಮ ಒಳಗೆ ಶಕ್ತಿಯಿದ್ದಾಳೆ. ನೀವು ಯೋಗ್ಯವೃತ್ತಿಯನ್ನು ಕೈಕೊಂಡು ಅವಳಿಗೆ ನೆರವಾಗಿರಿ; ಅವಳು ಕಾರ್ಯಕಾರಿಣಿಯಾಗಲಿ.

ನೀವು ಸಾಕ್ಷಿ, ಅನುಮಂತಾ, ಭೋಕ್ತಾ, ಭರ್ತಾ ಆಗಿರುವಿರಿ. ಅನುಮಂತೃವಿನಂತೆ ಅಪ್ಪಣೆ ಮಾಡಿರಿ, ಸಾಕ್ಷಿಯಂತೆ ಫಲ-ಪರಿಣಾಮ ಗಳ ಲಕ್ಷ್ಯವಿಲ್ಲದೆ ಅವಳ ಕಾರ್ಯವನ್ನು ಈಕ್ಷಿಸಿರಿ, ಮತ್ತು ಭೋಕ್ತೃ ವಿನಂತೆ ಫಲ-ಪರಿಣಾಮವನ್ನು ಭೋಗಿಸಿರಿ, ಹಾಗೂ ಭರ್ತನಂತೆ ಆಧಾರವನ್ನು ಒದಗೊಳಿಸಿ ಅವಳಿಗೆ ಸಹಾಯಕರಾಗಿರಿ.

ತಾಮಸಿಕ ಉದಾಸೀನತೆಯಿಂದ ಇಲ್ಲವೆ ರಾಜಸಿಕ ಉದ್ಧಾಮ ತನದಿಂದ ಅದನ್ನು ನಾಶಗೊಳಿಸಬೇಡಿರಿ. **ನಿಮ್ಮ ಸಂಕಲ್ಪಶಕ್ತಿಯು ಕ್ರಿಯಾಶೀಲವಾಗುವದರಲ್ಲಿ ಎಂದೂ ಸೋಲುವದಿಲ್ಲವೆಂಬು ದರ ಬಗೆಗೆ ನಿಮಗೆ ಮನವರಿಕೆಯಿರಲಿ.** ನೀವು ಜ್ಞಾತಾ ಇರುವಿರಿ, ಅದು ತಾನಾಗಿ ಕೊಡುವ ಸಕಲಜ್ಞಾನವನ್ನು ನೀವು ಸ್ವೀಕರಿಸಿರಿ. ನಾನು ಇಲ್ಲಿ ವಿವರಿಸಿದಂಥ ವೃತ್ತಿಯನ್ನು ಅಳವಡಿಸಿ ಕೊಂಡು ಅದನ್ನು ಸಾಧನ ಮತ್ತು ಜೀವನದ ಪ್ರತಿಯೊಂದು ವೈಯ್ಯ ಕ್ತಿಕ ಕ್ರಿಯೆಗೆ ಪ್ರಯೋಗಿಸಿರಿ. **ನೀವು ಇನ್ನೇನೂ ಮಾಡಬೇಕಾ ಗಿಲ್ಲ. ಉಳಿದದ್ದನ್ನೆಲ್ಲ ಕಾಲಿಯು ಮಾಡುವಳು.**

ತೊಂದರೆ ಪಡಬೇಡಿರಿ, ವ್ಯಾಕುಲಪಡಬೇಡಿರಿ, ಆತುರ ಪಡ ಬೇಡಿರಿ; ನಿನ್ನ ಇದುರಿಗೆ ಅಖಂಡ ಶಾಶ್ವತ ಕಾಲವಿದೆ, ಯಾಕೆ ಆತುರ ಪಡುವಿರಿ? ಆದರೆ ತಾಮಸಿಕರಾಗಿ ಸೋಮಾರಿತನದಿಂದ ಮಾತ್ರ ಕಾಲವನ್ನು ವ್ಯರ್ಥ ಕಳೆಯಬೇಡಿರಿ.



## ೨ ಶಕ್ತಿಯ ಸ್ಥಾನ ಮತ್ತು ಕಾರ್ಯ

ಪ್ರಕರಣೋಪಕ್ರಮಣಿಕೆ: —

ಮಾನವದೇಹದಲ್ಲೇ ಇರುವ ಪರಾತ್ಪರ ಪುರುಷನಿಗೆ ಗೀತೆಯಲ್ಲಿ ಉಪದ್ರಷ್ಟಾ, ಅನುಮಂತಾ, ಭರ್ತಾ, ಭೋಕ್ತಾ, ಮಹೇಶ್ವರ, ಪರಮಾತ್ಮ ಎಂಬ ಶಬ್ದಗಳನ್ನು ಪ್ರಯೋಗಿಸಲಾಗಿದೆಯಷ್ಟೇ? (ಗೀತಾ ೧೩-೨೨.) ಈ "ಅಸ್ಮಿನ್ ದೇಹೇ ಪುರುಷಃಪರಃ" ಎಂದೆನ್ನಿಸಿಕೊಳ್ಳುವವನ ಶಕ್ತಿಯೇ ಪ್ರಸ್ತುತದ ಸಂಕಲ್ಪಶಕ್ತಿಯು. ದೇಹಸ್ಥ ಪುರುಷನಿಗೆ ಮಹೇಶ್ವರನೆಂದೂ, ಪರಮಾತ್ಮನೆಂದೂ ಹೇಳುವುದಾದರೆ ಆತನ ಶಕ್ತಿಯಾದ ಇವಳಿಗೆ ದೇಹಸ್ಥ ಪರಮೇಶ್ವರಿಯೆಂದು ಹೇಳಲಿಕ್ಕೆ ಆತಂಕವೇನು? ಅವಳು ಸಹಸ್ರದಳ ಪದ್ಮದಲ್ಲಿ ಜಾಗೃತಳಾಗಿಯೂ, ಕೆಳಗಿನ ಉಳಿದೆಲ್ಲ ಚಕ್ರಗಳಲ್ಲಿ ಸುಪ್ತಳಾಗಿಯೂ ಇರುತ್ತಾಳೆಂದು ಗುರು ಅರವಿಂದರು ಒಂದೆಡೆಯಲ್ಲಿ ಹೇಳಿದ್ದಾರೆ- "ಅದು ಕೆಳಗಿನ ಸಕಲ ಕೇಂದ್ರಗಳಲ್ಲಿ ಸುರಳಿಸುತ್ತಿಕೊಂಡು ಸುಪ್ತವಾಗಿರುವದರಿಂದ ತಂತ್ರಗಳಲ್ಲಿ ಕುಂಡಲಿನೀ ಶಕ್ತಿಯೆಂದು ಅದಕ್ಕೆ ಅನ್ನಲಾಗಿದೆ. ಆದರೆ ಅವಳು ಈಶ್ವರ ಶಕ್ತಿಯಾಗಿ ನಮ್ಮ ಮೇಲ್ಗಡೆಗೆ ಅರ್ಥಾತ್ ನಮ್ಮ ತಲೆಗಿಂತ ಮೇಲೆ ಜಾಗೃತಳೂ ಸಜ್ಞಳೂ, ಸಮರ್ಥಳೂ,

ವಿಸ್ತೃತಳೂ ಆಗಿ ಇರುತ್ತಾಳೆ. ಈ ಮಾತೃಶಕ್ತಿಯ ಇದಿರಿಗೇ ನಮ್ಮ ಸಮಸ್ತ ಆಧಾರಯಂತ್ರವನ್ನು ಬಿಚ್ಚಿ ಬೈಲಿಗೆ ಇಡತಕ್ಕದ್ದಾಗಿದೆ.

ಸತ್, ಚಿತ್, ಆನಂದ, ವಿಜ್ಞಾನ ಮನ, ಪ್ರಾಣ, ದೇಹ ಎಂದು ಏಳು ವಿಭಾಗಗಳನ್ನು ಪೂರ್ವಿಕರು ನಮ್ಮ ಒಳಗೆ ಕಲ್ಪಿಸಿದ್ದಾರಷ್ಟೆ? ಇವುಗಳಲ್ಲಿ ಕೊನೆಯ ಅಥವಾ ಕೆಳಗಿನ ಮೂರು ಮಾತ್ರವೆ (ದೇಹ, ಪ್ರಾಣ, ಮನ) ನಮ್ಮ ಅನುಭವಕ್ಕೆ ಗೊತ್ತಿವೆ. ಅದಗಂತೆ ಮೊದಲಿನ ಅಥವಾ ಮೇಲಿನ ಮೂರರ ಬಗೆಗೆ (ಸತ್, ಚಿತ್, ಆನಂದ) ಸಕಲ ಶಾಸ್ತ್ರಗಳು ಸರ್ವದಾ ಚರ್ಚಿಸುತ್ತ ಬಂದಿವೆ. ಆದರೆ ನಡುವಿನ "ವಿಜ್ಞಾನ"ವೆಂಬುದರ ಕಡೆಗೆ ಶ್ರೀ ಅರವಿಂದರ ಹೊರತು ಇನ್ನಾರೂ ಹೆಚ್ಚು ಗಮನಕೊಟ್ಟಿಲ್ಲ. ವೇದಾಂತಿಕರ ಪಂಚಕೋಶಗಳಲ್ಲಿ ಬರುವ "ವಿಜ್ಞಾನಮಯ ಕೋಶವು" ಇದಲ್ಲ. ವೇದಾಂತಿಕರ ಪಂಚಕೋಶಗಳೂ, ಉಪನಿಷತ್ಕಾರರ ಪಂಚಕೋಶಗಳೂ ಭಿನ್ನಭಿನ್ನವಾಗಿವೆ. ಸತ್, ಚಿತ್, ಆನಂದ ಈ ಮೂರನ್ನೂ ಕೂಡಿಸಿ ಉಪನಿಷತ್ಕಾರರು "ಆನಂದ" ವೆಂಬ ಒಂದೇ ಶಬ್ದದಿಂದ ಮಂಡಿಸುತ್ತಾರೆ. ಈಗ ಜನ ರೂಢಿಯಲ್ಲಿಯೂ ಕೂಡ "ಸಚ್ಚಿದಾನಂದ" ವೆಂದು ಒಂದೇ ಸಂಯುಕ್ತ ಶಬ್ದವಾಗಿಬಿಟ್ಟಿದೆ. ಗುರು

ಅರವಿಂದರೂ ಕೂಡ- ' ಸರ್ವೋಚ್ಚತಮ ಅವಸ್ಥೆಯಲ್ಲಿ ಅವು ಮೂರೂ ಒಂದೇ ಆಗಿವೆ"ಯೆಂದು ಒಂದೆಡೆಯಲ್ಲಿ ಹೇಳಿದ್ದಾರೆ. ಎಲ್ಲಕ್ಕೂ ಮೇಲಿನ ಈ " ಆನಂದ " ಅಥವಾ " ಸಚ್ಚಿದಾನಂದ "ವೆಂಬುದರ ಕಾರಭಾರವೇನೂ ಈಗ ನಮಗೆ ಬೇಕಾಗಿಲ್ಲ. ಅದರ ಕೆಳಗಿನದಾದ " ವಿಜ್ಞಾನ " ವೆಂಬುದೇ ನವಯುಗದಲ್ಲಿ ವಿಚಾರಣೀಯವಾದ ತತ್ವ ವಾಗಿದೆ. ದೇಹ-ಪ್ರಾಣ-ಮನಗಳಿಂದ ಕೂಡಿದ ಕೆಳಗಿನ ಜೀವನರಾಜ್ಯ ಮತ್ತು ಸಚ್ಚಿದಾನಂದಗಳಿಂದ ಕೂಡಿದ ತೀರ ಮೇಲಿನ ಪರಮನ ರಾಜ್ಯ ಇವೆರಡರ ನಡುವೆ ಸೇತುವೆಯಂತಿರುವ ನಿತ್ಯ ದಿವ್ಯರಾಜ್ಯವೇ ವಿಜ್ಞಾನ. ಸಚ್ಚಿದಾನಂದದಲ್ಲಿ ದೇಹಸ್ಥ ಪುರುಷನು ಗಾಢ ಆನಂದ ಮಗ್ನನಾಗಿ ನಿರಾಕಾರದಶೆಯಲ್ಲಿರುತ್ತಾನೆ. ಆಗ ಅವನಿಗೆ " ಪರಮ-ಆತ್ಮ "ನೆಂದು ಕರೆಯಲಾಗುವದು. ಆದರೆ ವಿಜ್ಞಾನದಲ್ಲಿ ಅವನು ಸಕಲೈಶ್ವರ್ಯಸಂಪನ್ನನಾದ ಈಶ್ವರ ನಾಗಿರುತ್ತಾನೆ. ಮೇಲಿನ ಸತ್, ಚಿತ್, ಆನಂದಗಳೇ ಇಲ್ಲಿ ಪ್ರಕಾಶ, ಶಕ್ತಿ, ಶಾಂತಿಗಳಾಗಿರುತ್ತವೆ. ಇದಕ್ಕಿಂತ ಕೆಳಗೆ ಬಂದರೆ ದೇಹ-ಪ್ರಾಣ-ಮನಗಳ ಬಾಹ್ಯರಾಜ್ಯದಲ್ಲಿ ಅದೇ ಆಂತರಿಕ ಪುರುಷನು ಅನೀಶನಾದ ಜೀವನಾಗು ತ್ತಾನೆ. ಆಗ ಅವೇ ಮೇಲಿನ ಪ್ರಕಾಶ-ಶಕ್ತಿ-ಶಾಂತಿಗಳು ಸತ್ವರಜಸ್ತಮಗಳಾಗಿ ಬಿಡುತ್ತವೆ. ಇಲ್ಲಿಗೆ ಪರಮನ

ಇಳಿಯುವಿಕೆಯ ಪರಿಪೂರ್ತಿಯಾಯಿತು. ವಿಜ್ಞಾನ ಪುರಷನಾದ ದೇಹಸ್ಥ ಈಶ್ವರನ ದಿವ್ಯಶಕ್ತಿಯೇ ದೇಹಸ್ಥ ಈಶ್ವರಿಯು. ಈ ತಾಯಿಯನ್ನು ಮೊದಲುಮಾಡಿ ಕೊಂಡೇ ಪೂರ್ಣಯೋಗವು ಮುಂದುವರಿಯುವದು.

ಇಂದು ನಿಮಗೆ ನಾನು **ಶಕ್ತಿ** ಅಥವಾ ಸಂಕಲ್ಪಬಲವೆಂಬುದರ ಬಗೆಗೆ ಹೇಳುವೆನು. ಯಾಕೆಂದರೆ ಅದುವೆ ಯೋಗದ ನೆಲಗಟ್ಟಾಗಿದೆ. ಶಕ್ತಿಯು ಶಿರಃಕಿರೀಟದ ತುಟ್ಟತುದಿಗಿಂತ ಮೇಲೆ ಸಹಸ್ರದಳದಲ್ಲಿ ಮಂಡಿಸಿ ಕುಳಿತು ಆ ಕ್ರಿಯಾಸ್ಥಲದಿಂದಲೇ ಕಾರ್ಯಪರವಾಗುವದು.

ಅದರ ಕೆಳಗೆ ಮಿದುಳಿನ ತುಟ್ಟತುದಿಯಲ್ಲಿ ಉಚ್ಚತರ ಬುದ್ಧಿಯಿದೆ. ಅದರ ಕೆಳಗೆ ಮಿದುಳಿನ ಮಧ್ಯತಲವನ್ನು ಆಕ್ರಮಿಸಿಕೊಂಡು ತರ್ಕ ಅಥವಾ ನಿಮ್ನಬುದ್ಧಿಯಿರುವದು. ಅದರ ಕೆಳಗಡೆಗೆ ಮಿದುಳಿನ ತಳಭಾಗದಲ್ಲಿ ಮನದೊಡನೆ ಸಂಪರ್ಕವುಳ್ಳ ಇಂದ್ರಿಯವಿದೆ. ಇದಕ್ಕೆ ತಿಳುವಳಿಕೆಯ ಅವಯವವೆಂದು ಅನ್ನಬಹುದು. ಜ್ಞಾನ, ತರ್ಕ, ಗುರುತಿಸುವಿಕೆ (Knowledge, Reason, Understanding) ಎಂಬವುಗಳು ಮಿದುಳಿನ ಮೂರು ಭಾಗಗಳಾಗಿವೆ. ಇವೆಲ್ಲ ಕ್ರಿಯೆಗಳು ಸೂಕ್ಷ್ಮಶರೀರದಲ್ಲಿರುತ್ತವೆ; ಆದರೆ ಅವು ಜಡದೇಹದ ಮಿದುಳಿನೊಳಗಿನ ಸಮಕೇಂದ್ರಗಳಿಗೆ ಜೋಡಿಸಲ್ಪಟ್ಟಿವೆ.

ವಕ್ಷಸ್ಥಲದಲ್ಲಿ ಅಂದರೆ ಹೃದಯದ ಮೇಲ್ಗಡೆಗೆ ಮನಸವಿದೆ. ಅದು ತನ್ನ ಅಧೀನದಲ್ಲಿರುವ ಪಂಚೇಂದ್ರಿಯಗಳ ಸಹಾಯದಿಂದ ವಿಷಯಗ್ರಹಣ ಮಾಡುವ ಯಂತ್ರವಾಗಿದೆ. ಮನಸ್ಸಿನ ಕೆಳಗೆ ಹೃದಯ ಮತ್ತು ನಾಭಿಪ್ರದೇಶ ಇವೆರಡರ ಮಧ್ಯಮಾರ್ಗದಲ್ಲಿ ಚಿತ್ತವಿದೆ. ಆ ಬಿಂದುವಿನಿಂದ ಅಂದರೆ ನಾಭಿಪ್ರದೇಶದ ಊರ್ಧ್ವಭಾಗದಿಂದ ಅದೇ ನಾಭಿಯ ನಿಮ್ನ ಪ್ರದೇಶದವರೆಗಿರುವ ಸ್ಥಳದಲ್ಲಿ ಸೂಕ್ಷ್ಮ ಪ್ರಾಣವಿರುವದು. ಇವೆಲ್ಲವುಗಳು ಸೂಕ್ಷ್ಮದೇಹದಲ್ಲಿರುವವು; ಆದರೆ

ಸ್ಥೂಲದೇಹದಲ್ಲಿ ಮೇಲ್ಕಾಣಿಸಿದ ಕೇಂದ್ರಗಳಿಗೆ ಅವು ಸಂಯೋಜಿತವಾಗಿವೆ.

ಕೇವಲ ಸ್ಥೂಲದೇಹದಲ್ಲಿ ಎರಡು ಕ್ರಿಯೆಗಳು ಸ್ಥಾಪಿತವಾಗಿವೆ; ಭೌತಿಕಪ್ರಾಣ ಅಥವಾ ಜ್ಞಾನತಂತು ಮಂಡಲವೊಂದು, ಹಾಗೂ 'ಅನ್ನಂ' ಅಥವಾ ಜಡಶರೀರವೊಂದು.

ಇನ್ನು—**ಸಂಕಲ್ಪವೆಂಬುದು ದೇಹದ ಜೀವಂತ ಪ್ರಭುವಾದ ಈಶ್ವರನ ಇಂದ್ರಿಯವಾಗಿದೆ.** ಅದು ಇವೆಲ್ಲ ಕ್ರಿಯೆಗಳ ಮುಖಾಂತರವಾಗಿ ಕಾರ್ಯ ಮಾಡುತ್ತದೆ. ಬುದ್ಧಿ ಮುಖದಿಂದ ವಿಚಾರ ಮತ್ತು ಜ್ಞಾನ, ಮನೋಮುಖದಿಂದ ಇಂದ್ರಿಯಗ್ರಹಣ (Sensations), ಚಿತ್ತಮುಖದಿಂದ ಭಾವನೆಗಳು, ಪ್ರಾಣಮುಖದಿಂದ ಭೋಗ ಮೊದಲಾದವುಗಳನ್ನು ಕುರಿತು ಅದು ಕಾರ್ಯ ಮಾಡುವದು.

ಅದು ಯಾವಾಗ ಪೂರ್ಣ ರೀತಿಯಿಂದ ಕ್ರಿಯಾಕಾರಿಯಾಗಿರುವದೋ, ಅಂದರೆ ಆಯಾ ಯಂತ್ರಗಳ ಬಲಾನುಸಾರವಾಗಿ ಯಾವಾಗ ಕಾರ್ಯ ಮಾಡುವದೋ, ಆಗ ಶಕ್ತಿಯು ಕಾರ್ಯವು ಪರಿಪೂರ್ಣವಾದದ್ದೂ ಅಜೇಯುವಾದದ್ದೂ ಆಗುವದು. ಆದರೆ ಅದರ ಬಲಹೀನತೆಗೆ ಎರಡು ಕಾರಣಗಳಿರುತ್ತವೆ; ಪ್ರಮಾದ ಮತ್ತು ಪತನ, ಮೊದಲನೆಯದು ಯಂತ್ರಗಳ ಗಲಿಬಿಲಿ.

ಪ್ರಾಣವು—ವಿಷಯಗ್ರಹಣ, ಭಾವನೆ, ಮತ್ತು ವಿಚಾರ ಇವುಗಳಿಗೆ ಅಡ್ಡಬರಹತ್ತಿದರೆ ಆಗ ಮನುಷ್ಯನು ಅನೀಶನಾಗುತ್ತಾನೆ; ಪ್ರಾಣದ ದಾಸನಾಗುತ್ತಾನೆ; ವಾಸನಾವಶನಾಗುತ್ತಾನೆ.

ಚಿತ್ತವು—ವಿಷಯಗ್ರಹಣ ಮತ್ತು ವಿಚಾರ ಇವುಗಳಿಗೆ ಅಂತರಾಯಗೊಳಿಸುತ್ತಿದ್ದರೆ ಭಾವನೆಗಳ ಹಾಗೂ ಅವುಗಳ ಸಂಸರ್ಗದಿಂದ ಉದ್ಭವಿಸುವ ಅಭಿಲಾಷೆಗಳ ಮೂಲಕ ವಿಷಯಗ್ರಹಣಶಕ್ತಿಯೂ ವಿಚಾರಶಕ್ತಿಯೂ ತಪ್ಪುದಾರಿಗೆ ಬೀಳುತ್ತವೆ. ಉದಾಹರಣಾರ್ಥವಾಗಿ—ಪ್ರೇಮವು ಬುದ್ಧಿಗೆ ಪ್ರತಿಬಂಧಕವಾದರೆ ಮನುಷ್ಯನು ತನ್ನ ಪ್ರಿಯ

ವ್ಯಕ್ತಿಗೆ ಸಂಬಂಧಿಸಿದ ಸತ್ಯಾಂಶದ ಬಗೆಗೆ ಕುರುಡನಾಗುತ್ತಾನೆ. ಆ ವ್ಯಕ್ತಿಯ ಸಂಬಂಧದಲ್ಲಿ ಯೋಗ್ಯಾಯೋಗ್ಯವೆಂಬುದರ ಹಾಗೂ ಕರ್ತವ್ಯ ಅಕರ್ತವ್ಯವೆಂಬುದರ ವಿವೇಚನೆಯನ್ನು ಮಾಡುವುದಕ್ಕೆ ಆತನು ಅಸಮರ್ಥನಾಗಿರುತ್ತಾನೆ. ಅವನು ಹೆಚ್ಚು ಇಲ್ಲವೆ ಕಡಿಮೆ ಪ್ರಮಾಣದಿಂದ ಅನುರಾಗ, ಕೋಪ, ತಿರಸ್ಕಾರ, ಕಾರುಣ್ಯ, ಪ್ರತಿಹಿಂಸೆ ಮೊದಲಾದ ಭಾವನೆಗಳ ದಾಸನಾಗಿಬಿಡುತ್ತಾನೆ.

ಅದರಂತೆ ಮನಸ್ಸು—ತರ್ಕಕ್ಕೆ ಅಡ್ಡಬರುತ್ತಿದ್ದರೆ ಅವನ ವಿಷಯ ಗ್ರಹಣಶಕ್ತಿಯು ಯೋಗ್ಯ ವಿಚಾರಗಳಿಗೂ ಸತ್ಯಸಿದ್ಧಾಂತಕ್ಕೂ ಎರವಾಗುತ್ತದೆ. **ಆತನು ತಾನು ಕಂಡದ್ದರ ಹಾಗೂ ಕೇಳಿದ್ದರ ಆಧಾರದಿಂದಲೇ ನಿರ್ಣಯ ಮಾಡುತ್ತಾನೆ; ಆದರೆ ತಾನು ಕಂಡು ಕೇಳಿದ್ದನ್ನು ಪರೀಕ್ಷಿಸುವ ಗೊಡವೆಗೆ ಹೋಗುವದಿಲ್ಲ.**

ಇದಲ್ಲದೆ ತರ್ಕ, ಕಲ್ಪನೆ, ಸ್ಮೃತಿ, ಮತ್ತು ಅನುಮಾನ—ಇವು ಜ್ಞಾನಕ್ಕೆ ಅಡ್ಡಬಂದಲ್ಲಿ ಮನುಷ್ಯನು ಉಚ್ಚತರ ಜ್ಞಾನಕ್ಕೆ ಎರವಾಗಿ ಶಕ್ಯ–ಸಂಭವಗಳ ಮಗ್ಗಿಯುಲಾರದ ವರ್ತುಲದಲ್ಲಿ ತೊಳಲಾಡುತ್ತಾನೆ.

ಕೊನೆಗೆ ಬುದ್ಧಿಯೂ ಕೂಡ—ಸಂಕಲ್ಪಶಕ್ತಿಗೆ (will) ಅಂತರಾಯಗೊಳಿಸುತ್ತಿದ್ದರೆ ಮನುಷ್ಯನು ಸರ್ವಸಾಮರ್ಥ್ಯದ ಸನ್ನಿಧಾನದಲ್ಲಿ ಸಂಚರಿಸುವುದಕ್ಕೆ ಬದಲಾಗಿ ತನ್ನ ಸೀಮಾಬದ್ಧ ಜ್ಞಾನದ ಬಲದಲ್ಲಿಯೇ ಬದ್ಧನಾಗಿಬಿಡುತ್ತಾನೆ.

ಸಾರಾಂಶವೇನಂದರೆ–ಯಾವದಾದರೊಂದು ಯಂತ್ರವನ್ನು ಅಥವಾ ಆಯುಧವನ್ನು ಅದು ಯಾವ ಕಾರ್ಯಕ್ಕೆ ಯೋಗ್ಯವಿಲ್ಲವೋ ಆ ಕಾರ್ಯಕ್ಕೆ ಉಪಯೋಗಿಸಿದರೆ ಅಥವಾ ಯಾವದರ ಸಲುವಾಗಿ ಮೂಲತಃ ಅದು ನಿರ್ಮಿತವಾಗಿಲ್ಲವೋ ಅಂಥ ಕಾರ್ಯಕ್ಕೆ ಉಪಯೋಗಿಸಿದರೆ ಅದು ಆ ಕೆಲಸವನ್ನೇ ಮಾಡುವದಿಲ್ಲ; ಇಲ್ಲವೆ ಮಾಡಿದರೂ ಅಯೋಗ್ಯರೀತಿಯಿಂದ ಮಾಡುತ್ತದೆ; ಧರ್ಮಸಂಕರವು ಹುಟ್ಟಿಬಿಡುತ್ತದೆ.

ಈವರೆಗೆ ನಾನು ವರ್ಣಿಸಿದ್ದು ಜ್ಞಾನವನ್ನು ಗಳಿಸುವದಕ್ಕಿಂತ ಪೂರ್ವದಲ್ಲಿ ಮಾನವರಿಗಿರುವ ಸಾಮಾನ್ಯಸ್ಥಿತಿಯನ್ನು ಕುರಿತದ್ದಾಗಿದೆ. ಇದೆಲ್ಲವೂ ಧರ್ಮಸಂಕರ ಅಥವಾ ಕ್ರಿಯೆಗಳ ಗಲಬಿಲಿಯೇ ಆಗಿದೆ; ಅಯೋಗ್ಯ ಆಡಳಿತ, ಅಜ್ಞ ಆಳಿಕೆ ಎಂದು ಇದಕ್ಕೇ ಅನ್ನುವುದು.

ನಿಜವಾದ ಮಂತ್ರಿಯಾಗಿರುವ ಸಂಕಲ್ಪಶಕ್ತಿಯು ಕೆಳಗಿನ ಸ್ವಾರ್ಥಪರ ಅಧಿಕಾರಿಗಳ ಕೈಯೊಳಗಿನ ಗೊಂಬೆಯಾಗಿಬಿಟ್ಟಿದೆ. ಅವ ರಾದರೋ ಒಬ್ಬರಿಗೊಬ್ಬರು ಅಡ್ಡಬರುತ್ತ ಒಬ್ಬರನ್ನೊಬ್ಬರು ನೂಕುತ್ತ ಒಬ್ಬರ ಕೈಯೊಳಗೊಬ್ಬರು ಅಪ್ರಾಮಾಣಿಕತನದಿಂದ ವರ್ತಿಸುತ್ತ ತಮ್ಮ ತಮ್ಮ ಲಾಭಕ್ಕಾಗಿ ಪ್ರಭುವಾದ ಈಶ್ವರನನ್ನು ಹೀನದಶೆಗೆ ಇಳಿಸುತ್ತಿದ್ದಾರೆ. **ಆದುದರಿಂದ ಆತನು ಈಶ್ವರತ್ವವನ್ನು ಪರಿತ್ಯಜಿಸಿ ಅನೀಶನಾಗಿ ತನ್ನ ಸೇವಕರ ಕೈಯೊಳಗಿನ ಸೂತ್ರದ ಗೊಂಬೆಯಾಗಿಬಿಡುತ್ತಾನೆ.**

ಆತನು ಇದಕ್ಕೆ ಏಕೆ ಸಮ್ಮತಿಸುವನು? ಅಜ್ಞಾನವೇ ಇದಕ್ಕೆ ಕಾರಣವು. ಮಂತ್ರಿಗಳು, ಅಧಿಕಾರಿಗಳು ಮತ್ತು ಲಕ್ಷ್ಯಗಟ್ಟಲೆ ಬಾಲ ಅಲ್ಲಾಡಿಸುವವರು ತನ್ನ ಸಲುವಾಗಿ ಏನು ನಡೆಯಿಸಿರುವರೆಂಬುದನ್ನು ಆತನು ಅರಿಯದಂತಾಗಿದ್ದಾನೆ. ಈ ಅಜ್ಞಾನವೆಂಬುದು ಏನದು? ತನ್ನ ಸ್ವಂತದ ಪ್ರಕೃತಿ, ಯೋಗ್ಯತೆ, ಮತ್ತು ಅಧಿಕಾರ ಇವುಗಳನ್ನು ಗುರುತಿಸದಿರುವುದೇ ಅದು. ತನ್ನ ಸಾಮ್ರಾಜ್ಯದ ಒಂದು ಚಿಕ್ಕ ಅಂಶವಾಗಿರುವ ದೇಹವನ್ನು ಆತನು ಆಳವಾಗಿ ಅಂಟಿಕೊಳ್ಳಲಾರಂಭಿಸಿದನು. "ಅದು ನನ್ನ ರಾಜ್ಯ" ಎಂದು ಆಲೋಚಿಸಿದನು. ಆದುದರಿಂದ ಆತನು ದೈಹಿಕ ಕ್ರಿಯೆಗಳ ಯಂತ್ರವಾಗಿಬಿಟ್ಟನು. ಅದರಂತೆ ಜ್ಞಾನತಂತು, ಇದ್ರಿಯಜ್ಞಾನ, ಭಾವನೆ, ಬುದ್ಧಿ ಇವೆಲ್ಲವುಗಳೊಡನೆ ತಾನು ಏಕಾತ್ಮನಾಗಿಬಿಡುತ್ತಾನೆ. **ತಾನು ಅವೆಲ್ಲವುಗಳಿಗಿಂತ ಭಿನ್ನನೆಂಬುದನ್ನೂ, ಅವುಗಳಿಗಿಂತ ತಾನು ಹೆಚ್ಚು ಮಹತ್ವ ಉಳ್ಳವನೂ, ಬಲಶಾಲಿಯೂ ಆಗಿರುವನೆಂಬುದನ್ನೂ ಆತನು ಮರೆಯುತ್ತಾನೆ. ಆತನು ಮಾಡಬೇಕಾದುದೇನೆಂದರೆ ತನ್ನ**

**ಆಧಿಪತ್ಯವನ್ನು ತಿರುಗಿ ಸ್ಥಾಪಿಸಬೇಕು. ತಾನು ಈಶ್ವರನು, ರಾಜನು, ಪ್ರಭುವು; ತಾನೇ ದೇವನು ಎಂಬುದನ್ನು ಸ್ಮರಿಸಿ ಕೊಳ್ಳಬೇಕು.** ಈ ತಿಳುವಳಿಕೆಯ ಮೇಲಿಂದ ತಾನು ಸರ್ವಸಮರ್ಥ ನೆಂಬುದನ್ನು ಆತನು ನೆನಪಿಗೆ ತಂದುಕೊಳ್ಳಲಿಕ್ಕೆಬೇಕು.

ಆತನಿಗೆ 'ಸಂಕಲ್ಪ'ವೆಂಬ ಒಬ್ಬ ಬಲಶಾಲಿಯಾದ ಮಂತ್ರಿ ಯಿದ್ದಾಳೆ. ಅವಳು ಸಂಕಲ್ಪಕ್ಕೆ ಬೆಂಬಲಕೊಟ್ಟು ಅದನ್ನು ನೇರವಾಗಿ ನಡೆಯಿಸಬೇಕು. ಅಷ್ಟಾದರೆ ಆ ಸಂಕಲ್ಪವು ಆಧಿಪತ್ಯದಲ್ಲೆಲ್ಲ ರಾಜಾ ಜ್ಞೆಯನ್ನು ಸಾರಿ ಅಧಿಕಾರಿಗಳೆಲ್ಲ ತಮ್ಮತಮ್ಮ ಕರ್ತವ್ಯವನ್ನು ವಿಧೇಯ ಪೂರ್ವಕವಾಗಿ ಪರಿಪೂರ್ಣರೀತಿಯಿಂದ ನೆರವೇರಿಸುವಂತೆ ಮಾಡುತ್ತದೆ.

ಎಲ್ಲವೂ ಏಕಕಾಲಕ್ಕೆ ಆಗಲಾರದೆಂಬುದು ನಿಜ. ಅದಕ್ಕೆ ಕಾಲವು ಬೇಕು. ಅಸ್ತವ್ಯಸ್ತ ಕೆಲಸ ಮಾಡುವದಕ್ಕೂ, ವಿಪರೀತ ರಾಜ್ಯ ಮಾಡುವದಕ್ಕೂ ಬಹಳವಾಗಿ ಮೈಯುಂಡು ಬಿಟ್ಟಿರುವ ಅಧಿಕಾರಿ ಗಳು ಮೊದಲಿಗೆ ಸರಿಯಾಗಿ ಕೆಲಸ ಮಾಡುವುದಕ್ಕೇ ಹಾರೈಸುವದಿಲ್ಲ. ಎರಡನೆಯ ಮಾತೇನೆಂದರೆ ಒಂದು ವೇಳೆ ಅವರು ಹಾಗೆ ಅಪೇಕ್ಷಿಸಿ ದರೂ ಅವರಿಗೆ ಅದು ಬಿಗಿಯೆಂದು ತೋರುವದು. ಹೇಗೆ ಆರಂಭಿಸ ಬೇಕೆಂಬುದೂ ಕೂಡ ಅವರಿಗೆ ಗೊತ್ತಾಗಬೇಕಾದರೆ ಬಹಳ ಕಷ್ಟ.

ಉದಾಹರಣಾರ್ಥವಾಗಿ— ನಿಮ್ಮ ಸಂಕಲ್ಪವನ್ನು ಯಾವಾಗ ನೀವು ಉಪಯೋಗಿಸಲಿಕ್ಕೆ ಪ್ರಾರಂಭಿಸುವಿರೋ ಆಗ ಏನೇನು ಜರಗ ಬಹುದು? ಮೊದಲಿಗೆ ನೀವು ಅದನ್ನು ಪ್ರಾಣದ ಮುಖಾಂತರವಾಗಿ ವಾಸನೆ, ಅಭಿಲಾಷೆ, ಆಶೆ ಮೊದಲಾದವುಗಳೊಳಗಿಂದ ಹಾಯಿಸಿ ಪ್ರಯೋಗಿಸುವುದಕ್ಕೆ ಪ್ರಯತ್ನಿಸುವಿರಿ. ಅಥವಾ ಚಿತ್ತದ ಮುಖಾಂ ತರವಾಗಿ ಭಾವೋದ್ರೇಕ, ವ್ಯಾಕುಲತೆ, ಭರವಸ ಮೊದಲಾದವು ಗಳೊಂದಿಗೆ ಅದನ್ನು ಪ್ರಯೋಗಿಸುವಿರಿ. ಇದಲ್ಲದೆ ಮನದ ಮುಖಾಂ ತರದಿಂದ ಅದನ್ನು ಬಳಸುವಾಗ ಯತ್ನ, ಹೋರಾಟ, ಶ್ರಮ ಮುಂತಾದವುಗಳನ್ನು ಆಶ್ರಯಿಸುವಿರಿ. ಬಾಹ್ಯಿಕ ಪರಿಶ್ರಮದಿಂದ

ವಿಷಯವನ್ನು ಹತೋಟಿಗೆ ತರಲೆಳಸುವವರಂತೆ ಮಾಡುವಿರಿ. ಅಥವಾ ಬುದ್ಧಿಯಿಂದ ಅದನ್ನು ಪ್ರಯೋಗಿಸುವಿರಿ. ಆಗ 'ಇದು ಇರಲಿ' 'ಅದು ಆಗಲಿ' ಎಂದು ಆಲೋಚಿಸುತ್ತ ನಿಮ್ಮ ರುಚಿಗೆ ತಕ್ಕಂಥ ವಿಷಯವನ್ನು ಆಳುವುದಕ್ಕೆ ಪ್ರಯತ್ನಿಸುವಿರಿ.

ಸಂಕಲ್ಪಶಕ್ತಿಯನ್ನು ಅರಳಿಸಿಕೊಳ್ಳುವುದಕ್ಕೆ ಯೋಗಿಗಳು ಇವೆಲ್ಲ ಪದ್ಧತಿಗಳನ್ನು ಉಪಯೋಗಿಸುತ್ತಾರೆ. ಹಠಯೋಗಿಯು ಪ್ರಾಣ ವನ್ನೂ ಶರೀರವನ್ನೂ ಇದಕ್ಕೆ ಉಪಯೋಗಿಸುತ್ತಾನೆ. ರಾಜ ಯೋಗಿಯು ಚಿತ್ತ, ಮನ ಮತ್ತು ಬುದ್ಧಿ ಇವುಗಳನ್ನು ಉಪಯೋಗಿ ಸುವನು. ಆದರೆ ಸರ್ವೋತ್ತಮ ಪದ್ಧತಿಯು ಇವುಗಳಲ್ಲೊಂದೂ ಅಲ್ಲ. ಇವುಗಳಲ್ಲಿ ಎರಡನೆಯ ತರಗತಿಯ ಉತ್ತಮ ಪದ್ಧತಿಯೆಂದು ಹೇಳಬಹುದಾದ ಕೊನೆಯದು ಸಹ ಹೋರಾಟ, ಸೋಲು, ನಿರಾಶೆ ಗಳನ್ನು ತರುತ್ತದೆ.

ಸಂಕಲ್ಪವು ಇವೆಲ್ಲವುಗಳಿಂದ ದೂರಸರಿದು ಪ್ರಯತ್ನ, ಭಾವೋ ದ್ರೇಕ, ವ್ಯಾಕುಲತೆ ಮತ್ತು ವಾಸನೆಗಳಿಲ್ಲದೆ ಸಹಸ್ರದಳದಿಂದ ನೇರ ವಾಗಿ ವಿಷಯದ ಮೇಲೆ ಯಾವಾಗ ಕಾರ್ಯಕಾರಿಯಾಗುವದೋ ಆಗ ಮಾತ್ರ ಅದರ ಕ್ರಿಯೆಗೆ ಪರಿಪೂರ್ಣತೆಯುಂಟಾಗುವದು. ಪ್ರತಿ ಯೊಂದರ ಕ್ರಿಯೆಯು ಆದರದು ಅವಕ್ಕಿದ್ದರೆ ಸಂಕಲ್ಪವು ತನ್ನ ಕ್ರಿಯೆ ತಾನೇ ಆಗಿದೆ. ಅದು ಯಾವಾಗಲೂ ಈಶ್ವರನಿಗೆ ವಿಧೇಯವಾಗಿ ಇರುವದಾದರೂ ತನ್ನೊಳಗೆ ತನ್ನಿಂದಲೇ ಕಾರ್ಯಮಾಡುತ್ತಲಿರುವದು; ಉಳಿದವುಗಳನ್ನೆಲ್ಲ ತಾನೇ ಉಪಯೋಗಿಸುವದು, ತಾನು ಅವುಗಳಿಂದ ಉಪಯೋಗಿಸಲ್ಪಡುವದಿಲ್ಲ.

ಅದು ಬುದ್ಧಿಯನ್ನು ಜ್ಞಾನಕ್ಕಾಗಿ ಉಪಯೋಗಿಸುವದೇ ಹೊರತು ಆದೇಶ ಕೊಡುವುದಕ್ಕಲ್ಲ, ಮನವನ್ನು ಇಂದ್ರಿಯ ಜ್ಞಾನದ ಸಲುವಾಗಿ ಉಪಯೋಗಿಸುವದೇ ಹೊರತು ಆದೇಶ ಇಲ್ಲವೆ ಜ್ಞಾನಕ್ಕಲ್ಲ.

ಚಿತ್ತವನ್ನು ಅದು ಭಾವನೆಗಳಿಗಾಗಿ ಬಳಸುವದು, ಆದರೆ ಇಂದ್ರಿಯ ಗ್ರಹಣ, ಜ್ಞಾನ ಮತ್ತು ಆದೇಶಗಳಿಗಾಗಿ ಅಲ್ಲ. ಪ್ರಾಣವನ್ನು ಭೋಗದ ಸಲುವಾಗಿ ಪ್ರಯೋಗಿಸುವದು, ಆದರೆ ಉಳಿದ ಇನ್ನಾವ ಕ್ರಿಯೆಗಳಿಗಾಗಿ ಅಲ್ಲ. ದೇಹವನ್ನು ಅದು ಚಲನವಲನ ಹಾಗೂ ಕರ್ಮದ ಸಲುವಾಗಿ ಉಪಯೋಗಿಸುವದೇ ಹೊರತು ಜ್ಞಾನ, ಸಂವೇದನೆ, ಇಂದ್ರಿಯಗ್ರಹಣ, ಶಕ್ತಿ ಅಥವಾ ಭೋಗ ಇವುಗಳಲ್ಲಿ ಯಾವುದನ್ನೂ ನಿರ್ಧರಿಸುವ ಇಲ್ಲವೆ ತಡೆಯುವ ಕೆಲಸಕ್ಕೆ ಅದನ್ನು ಬಿಡುವದಿಲ್ಲ.

ಆದುದರಿಂದ ಅದು ಇವೆಲ್ಲವುಗಳಿಂದ ತನ್ನನ್ನು ಬೇರ್ಪಡಿಸಿ ಕೊಳ್ಳಲಿಕ್ಕೆಬೇಕು. ಮತ್ತು ಅವುಗಳಿಂದ ತಾನೊಂದು ಭಿನ್ನವಸ್ತು ವಾಗಿರುವಂತೆ ದೂರನಿಂತು ಅವೆಲ್ಲವುಗಳಿಗೆ ಆಜ್ಞೆಯನ್ನು ವಿಧಿಸಬೇಕು. **ಇವೆಲ್ಲ ಕೇವಲ ಯಂತ್ರವಾತ್ರವಾಗಿವೆ. ಪುರುಷನು ಯಂತ್ರಿ ಅಥವಾ ಯಂತ್ರದ ಪ್ರಭುವಾಗಿದ್ದಾನೆ. ಸಂಕಲ್ಪವು ವಿದ್ಯುಚ್ಛಕ್ತಿ ಅಥವಾ ಮೋಟರ್ ಪಾವರ್ ಆಗಿದೆ.**

ಸರಿಯಾದ ಜ್ಞಾನವು ಇದೇ. ಇದನ್ನು ಹೇಗೆ ಪ್ರಯೋಗಿಸ ಬೇಕೆಂಬುದನ್ನು ಹಿಂದಿನಿಂದ ಹೇಳುವೆನು. ಅದು ಸಾಧನೆಯ ವಿಷಯ, ಬರೇ ಬೋಧನೆಯದಲ್ಲ. ಧೈರ್ಯವುಳ್ಳ ಮನುಷ್ಯನಿಗೆ,— ತೀರ ತುಸು ಮಾತ್ರವಾದರೂ ಧೀರಸ್ಥಿರತೆಯುಳ್ಳ ಮನುಷ್ಯನಿಗೆ ಸಂಕಲ್ಪಶಕ್ತಿಯಿಂದ ಯಂತ್ರದ ಮೇಲೆ ಪ್ರಭುತ್ವವನ್ನು ಗಳಿಸುವುದಕ್ಕೆ ಕ್ರಮವಾಗಿ ರೂಢಿ ಯಾಗುವದು. ಆದರೆ ಆತನು ಎಲ್ಲಕ್ಕೂ ಮೊದಲಿಗೆ ಅರಿತುಕೊಳ್ಳ ಬೇಕಾದುದೇನೆಂದರೆ— **ಯಂತ್ರದ ಬಗೆಗೆ ಜ್ಞಾನವಮಾಡಿಕೊಳ್ಳ ಬೇಕು; ಚಾಲಕ ಶಕ್ತಿಯ ಬಗೆಗೆ ಅರಿಯಬೇಕು; ಮತ್ತು ತನ್ನನ್ನು ತಾನು ಗುರುತಿಸಬೇಕು.**

ಪ್ರಾರಂಭಿಸುವದಕ್ಕೆ ಪರಿಪೂರ್ಣಜ್ಞಾನವೇನೂ ಬೇಕಾಗಿಲ್ಲ. ಆದರೆ ಪ್ರಾಥಮಿಕ ಜ್ಞಾನವಾದರೂ ಕನಿಷ್ಠಪಕ್ಷಕ್ಕೆ ಇರಲಿಕ್ಕೇಬೇಕು. ಅದನ್ನೇ ನಾನು ನಿಮಗೆ ಕೊಡಲಿಕ್ಕೆ ಪ್ರಯತ್ನಿಸುತ್ತಿದ್ದೇನೆ. ಯಂತ್ರದ ವಿವಿಧ ವಿಭಾಗಗಳು ಮತ್ತು ಅವುಗಳ ಪ್ರಕೃತಿ ಹಾಗೂ ಕ್ರಿಯೆ ಇವುಗಳನ್ನೂ, '**ಸಂಕಲ್ಪ**'ದ ಗುಣಧರ್ಮವನ್ನೂ, ಈಶ್ವರನ ನಿಜಸ್ವಭಾವವನ್ನೂ ನಾನು ವಿವರಿಸುತ್ತಲಿದ್ದೇನೆ.



## ೩ ಶಕ್ತಿಗೆ ಸಾಧಕ-ಬಾಧಕಗಳು

ಪ್ರಕರಣೋಪಕ್ರಮಣಿಕೆ :—

" ತ್ರನ್ನೊಳಗಿನ ಹಾಗೂ ಸಕಲ ಚರಾಚರ ಭೂತಗಳೊಳಗಿನ ದೇವತ್ವವನ್ನು ಅನುಭವಿಸುವುದು ಪೂರ್ಣಯೋಗದ ಒಂದು ಅನಿವಾರ್ಯವಾದ ಅಂಗ ವಾಗಿದೆ. ದೇವತ್ವದ ಹೊರತು ಇಲ್ಲಿ ಇನ್ನಾವುದರ ಆಟವೂ ಸಾಗುವಂತಿಲ್ಲ. ಅಘಟಿತ ಸಾಧನೆ, ಅಘಟಿತ ಸಿದ್ಧಿ; ಅಘಟಿತ ಫಲ, ಅಘಟಿತ ಪ್ರಯೋಜನ. ಅಂದ ಬಳಿಕ ಕಿಂಚಿನ್ಮಾತ್ರವಾದ ಜೀವ-ಧರ್ಮದಲ್ಲಿದ್ದುಕೊಂಡು ಈ ಯೋಗದಲ್ಲಿ ಏನೇನೂ ಮಾಡುವುದಕ್ಕೆ ಶಕ್ಯವಿಲ್ಲ. ಇದರಲ್ಲಿ ಮಾನವನೊಳಗಿನ ದೇವನೇ ಸಾಧನೆ ಮಾಡ ಬೇಕು, ದೇವನೇ ಸಿದ್ಧಿಯನ್ನು ಪಡೆಯಬೇಕು; ಮತ್ತು ಚರಾಚರ ಭೂತಗಳೊಳಗಿನ ದೇವನಿಗಾಗಿಯೇ ಅದರ ಉಪಯೋಗವಾಗಬೇಕು. ಎಲ್ಲವೂ ದೇವನಿಗಾಗಿಯೇ; ಎಲ್ಲವೂ ದೇವನಿಂದಲೆ; ಎಲ್ಲವೂ ದೇವನೆ. ಬ್ರಹ್ಮಾರ್ಪಣ, ಬ್ರಹ್ಮಹವಿ, ಬ್ರಹ್ಮಾಗ್ನಿಯಲ್ಲಿ ಬ್ರಹ್ಮನಿಂದಲೇ ಆಹುತಿ; ಬ್ರಹ್ಮ ಕರ್ಮದಿಂದ ಬ್ರಹ್ಮವೇ ಗಂತವ್ಯ ಎಂದು ಗೀತೆ ಸಾರುವಂತೆಯೆ ಪೂರ್ಣಯೋಗದಲ್ಲಿಯೂ ಉಂಟು.

ದೇವತ್ವಕ್ಕಿಂತ ಕೆಳಗಿನ ಅನೀಶಜೀವನಿಗೆ ಅಪೂರ್ಣತೆಯಲ್ಲಿರುವುದೇ ವೈಯ್ಯುಂಡು ಹೋಗಿರುವದರಿಂದ ಅವನು ಅದಕ್ಕಿಂತ ಹೆಚ್ಚಿನದನ್ನು ಅಪೇಕ್ಷಿಸುವುದೂ ಇಲ್ಲ; ಮತ್ತು ನಂಬುವುದೂ ಇಲ್ಲ. ಜೀವಭಾವದ ಈ ಜಡ ಸ್ವಭಾವವೇ ಮಹಾಶಕ್ತಿಗೆ ಪ್ರಧಾನ ಅಂತರಾಯವು. ಉಚ್ಚ ಅವಸ್ಥೆಯಲ್ಲಿ ತಾನು ಶಕ್ತಿಸಂಪನ್ನನಾದ ಪಿಂಡಸ್ಥ ದೇವನೇ ಇರುವನೆಂಬುದರ ಸ್ಮರಣವು ಜೀವನಿಗುಂಟಾದರೆ ಆಗ ಆತನ ಮಹಾಶಕ್ತಿಯು ಆಗ ನಿರ್ಬಾಧಿತವಾಗುವದು.

ಸಂಕಲ್ಪ ಶಕ್ತಿಯು ಯಾವಾಗ ತನ್ನ ಕಾರ್ಯವನ್ನು ಪ್ರಾರಂಭಿಸುವದೋ ಆಗ ಅದಕ್ಕೆ 'ಸ್ವಭಾವ'ವು ತೊಡಕನ್ನು ಒಡ್ಡುತ್ತದೆ. **ಆದ್ದರಿಂದ ಸ್ವಭಾವದ ಮೇಲೆ ನೀವು ಗೆಲವನ್ನು ಗಳಿಸಲು ಸಮರ್ಥರಾಗುವವರೆಗೆ ಸಂಕಲ್ಪಶಕ್ತಿಯನ್ನು ಜೀವನದ ಮೇಲೆ ಪ್ರಯೋಗಿಸುವುದಕ್ಕೆ ಆಗಲಾರದು. ಮತ್ತು ಹಾಗೆ ಮಾಡಲೂ ಬಾರದು.** ಬೇರೆ ಮಾತಿನಲ್ಲಿ ಹೇಳಬೇಕೆಂದರೆ ನೀವು **ಶಕ್ತಿಮಾರ್ಗ**ದ ಸಾಧಕರಾಗಿರುವಷ್ಟು ಕಾಲ ಕೇವಲ ಸಾಧಕರು ಮಾತ್ರವೇ ಆಗಿರಿ. ಸಂಕಲ್ಪಶಕ್ತಿಯು ಸಿದ್ಧಿಯನ್ನು ಪಡೆದ ಬಳಿಕ ಮೊದಲಿಗೆ ಆ ಸಿದ್ಧಿಯನ್ನು ಆಧಾರದ (ಅಂದರೆ ಬುದ್ಧಿ, ಮನ, ಚಿತ್ತ, ಪ್ರಾಣ, ದೇಹ ಇವುಗಳ) ಪೂರ್ಣತೆಯನ್ನು ಗಳಿಸುವುದಕ್ಕೆ ಉಪಯೋಗಿಸಿರಿ. ಆಧಾರದ ಪೂರ್ಣತೆಯನ್ನು ಗಳಿಸಿಕೊಂಡ ಬಳಿಕ ಆ ಮೇಲೆ ಸಿದ್ಧದಶೆಗೆ ಮುಟ್ಟಿದ ಆಧಾರವನ್ನು ಕರ್ಮಕ್ಕೆ, ಜೀವನಕ್ಕೆ ಉಪಯೋಗಿಸಿರಿ.

ಸ್ವಭಾವವು ಸಂಕಲ್ಪಶಕ್ತಿಯ ಪೂರ್ಣತಾಯುಕ್ತಕ್ರಿಯೆಯನ್ನು ಅಲ್ಲಗಳೆಯುವುದಷ್ಟೇ? ಆದರೆ ಏಕೆ? ಏತಕ್ಕೆಂದರೆ ಮಾನವಪ್ರಕೃತಿಯು

ಅಪೂರ್ಣವಿದೆ. ಅಸಿದ್ಧವಿದೆ. ಅದರ ವಿಕಾಸವು ಕೇವಲ ಆಂಶಿಕವಾಗಿ ಆಗಿದೆ. ಅದರ ಸಕಲ ಧರ್ಮಗಳಲ್ಲಿ ಅದು ಅಸಿದ್ಧವಾಗಿರುವದರಿಂದ ಪರಿಪಾಕದ ತಾಮಸೀಧೃತಿಯು ಅದನ್ನು ಸಿದ್ಧದಶೆಗೊಯ್ಯುವ ಪ್ರಯತ್ನಗಳಿಗೆಲ್ಲ ಅದು ಪ್ರತಿಭಟಿಸುವಂತೆ ಮಾಡುತ್ತದೆ.

ಮಾನವಕೋಟಿಯು ವಿಕಾಸಹೊಂದುತ್ತಲಿದೆ. ಯೋಗವು ಆ ಕ್ರಮವಿಕಾಸವನ್ನು ಮಹತ್ತರವಾದ, ಜಯಪ್ರದವಾದ ವೇಗಕ್ಕೆ ಮುಟ್ಟಿಸುವ ಉಪಕರಣವಾಗಿದೆ. ಆದರೆ ಅಪೂರ್ಣದಶೆಯಲ್ಲಿರುವ ಸ್ವಭಾವವು ಅನ್ನುವದೇನೆಂದರೆ—"ನನಗೆ ಪೂರ್ಣತೆಯ ಅಪೇಕ್ಷೆಯಿಲ್ಲ. ಅಪೂರ್ಣತೆಯು ನನಗೆ ರೂಢವಾಗಿಬಿಟ್ಟಿದೆ. ಮತ್ತು ಅದು ನನಗೆ ಸುಲಭವೂ ಸುಖಕರವೂ ಅನಿಸಿದೆ." ಆದ್ದರಿಂದ ಮೊದಲಿಗೆ ಸಂಕಲ್ಪಶಕ್ತಿಯು ಸ್ವಭಾವದ ಗ್ರಹಿಕೆಯ ಮೇಲೆ ದಾಳಿ ಮಾಡಿ ತನ್ನ ಪೂರ್ಣವಿಕಾಸದ ಹಾಗೂ ಕರ್ತೃತ್ವದ ಮಾರ್ಗದೊಳಗಿನ ತಡೆಗಳನ್ನೆಲ್ಲ ಹೊಡೆದು ಹಾಕುವದು.

ನಾನು ಹೇಳಿದಂತೆ ಅದು ಮೊದಲಿಗೆ ಅಶಕ್ಯತೆಯ ಪೂರ್ವಸಂಸ್ಕಾರಗಳನ್ನು ಚದರಿಸುವದು. ನಾನು ದೇವನಲ್ಲ–ಮನುಷ್ಯನು, ಅಪರಿಸೀಮನಲ್ಲ–ಸೀಮಾಬದ್ಧನು, ಸರ್ವಸಮರ್ಥನಲ್ಲ–ಅಸಹಾಯನು ಎಂದೆನ್ನುವ ಅಜ್ಞಾನವೇ ಆ ಸಂಸ್ಕಾರವು. ಸಂಕಲ್ಪಶಕ್ತಿಯು ಮೊಟ್ಟಮೊದಲಿಗೆ ಹೇಳಬೇಕಾದುದೇನೆಂದರೆ—

'ನಾನು ಸರ್ವಸಮರ್ಥಳಿದ್ದೇನೆ. ಪುರುಷನು (ದೇಹಸ್ಥ ಈಶ್ವರನು) ವಿಧಿಸಿದುದನ್ನೆಲ್ಲ ನಾನು ನೆರವೇರಿಸಬಲ್ಲೆನು.' ಯಾಕೆಂದರೆ ಸಂಕಲ್ಪಶಕ್ತಿಯು ಅದ್ವಿತೀಯವಾದ ಕ್ರಿಯಾಶಕ್ತಿಯಾಗಿರುವಳು; ದೇವನ ದೈವೀತ್ರಾಣದ ಪ್ರಕಟನಾರೂಪಳಾದ ಸ್ವಯಂ ಕಾಲಿಯೇ ಅವಳು.

ಬಳಿಕ ಸಂಕಲ್ಪಶಕ್ತಿಯು ಸ್ವಂತ ತಾನು ಶುದ್ಧವಾಗುವುದರ ಸಲುವಾಗಿ ಆಧಾರದ ಮೇಲೆ ಆಕ್ರಮಣ ಮಾಡಿ ಅದನ್ನು ಶುದ್ಧ

ಗೊಳಿಸುವದು. ಯಂತ್ರಗಳ ನಿಯೋಗಗಳಲ್ಲಿ ಸಂಕರವೂ ಅಕ್ರಮವೂ ಘಟಿಸುವದರಿಂದಲೇ ಸಂಕಲ್ಪಶಕ್ತಿಯು ಸರ್ವಸಮರ್ಥರೀತಿಯಿಂದ ಕಾರ್ಯಕಾರೀಯಾಗುವದಿಲ್ಲವೆಂದು ನಾನು ವಿಶದಪಡಿಸಿರುವೆನಷ್ಟೇ. ಆದುದರಿಂದ ನೀವು ಮೊದಲಿಗೆ ಜ್ಞಾನವನ್ನು ವಿಕಾಸಗೊಳಿಸಿರಿ; ಮತ್ತು ಜ್ಞಾನದಿಂದ ಆಧಾರ ಶುದ್ಧಿಯನ್ನು ಸಾಧಿಸಿರಿ. ಯಾವಾಗ ಆಧಾರವು ಶುದ್ಧವಾಗುವದೋ ಆಗ ಸಂಕಲ್ಪವು ಕುಸಂಸ್ಕಾರಗಳ ಹಾಗೂ ಅನುಚಿತ ಕ್ರಿಯೆಗಳ ಬಂಧನದಿಂದ ಸಂಪೂರ್ಣ ಸ್ವತಂತ್ರವಾಗುವದರಿಂದ ನಾನು ಹೇಳುವಂತೆ ಅದು ಶುದ್ಧವಾಗುತ್ತದೆ; ಅದು ಸಂಪೂರ್ಣವಾಗಿ ಕಾರ್ಯಕಾರಿಯಾಗುತ್ತದೆ. ಹೀಗೆ ಪರಿಪೂರ್ಣವಾಗಿ ಅದು ಕೃತಿಶೀಲವಾಗುವದರಿಂದ ಆಧಾರವನ್ನು ಸಿದ್ಧದಶೆಗೆ ತರುತ್ತದೆ. ಅಂದರೆ ಆಧಾರವು ತನ್ನಿಂದತಾನೇ ಸಕಲದೋಷಗಳನ್ನೂ ಕೊರತೆಗಳನ್ನೂ ದುರ್ಬಲತೆಗಳನ್ನೂ ಚೆದರಿಸಿ ಬಿಟ್ಟು ಪೂರ್ಣರೀತಿಯಲ್ಲಿ ಕ್ರಿಯಾಶೀಲವಾಗುತ್ತದೆ. **ಪುರುಷನೂ ಶಕ್ತಿಯೂ** ತಮ್ಮ ಲೀಲೆಯನ್ನು ನಡಿಸುವದಕ್ಕೆಂದು ಆಧಾರವು **ಪುರುಷೋತ್ತಮನ** ಪೂರ್ಣದಶಾಪ್ರಾಪ್ತವಾದ ಯಂತ್ರವಾಗುವದು.

ಆದುದರಿಂದ ಲಕ್ಷಿಸಬೇಕಾದ ಮುಂದಿನ ಮೆಟ್ಟಲೆಂದರೆ ಜ್ಞಾನವೆ ಆಗಿದೆ. ಆದರೆ ಅದರ ಕಡೆಗೆ ಬರುವದಕ್ಕೆ ಮುಂಚೆ ಸ್ವಭಾವದ ತೊಡಕುಗಳ ಬಗೆಗೆ ಹೇಳಿ ಮುಗಿಸುವೆನು.

ಅಬದ್ಧ ಸಂಸ್ಕಾರಗಳು ಮತ್ತು ಆಧಾರದ ಅಶುದ್ಧಿ ಇವಿಷ್ಟೇ ಅಲ್ಲ; ವಸ್ತುಜಾತಗಳ ಸಾಮಾನ್ಯಪ್ರಕೃತಿಯಲ್ಲಿ ಯೋಗದ ವಿಕಾಸಕ್ಕೆ ವಿರೋಧಕಗಳಾದ ಬೇರೆ ಕೆಲವೊಂದು ಗತಿ ಅಥವಾ ನಿಯಮಗಳುಂಟು; ಅದರಂತೆ ಯೋಗದ ವಿಕಾಸಕ್ಕೆ ಸಹಾಯಕಗಳಾದ ಕೆಲವೊಂದು ಗತಿನಿಯಮಗಳೂ ಉಂಟು.

ಮೂರು ಬಾಧಕ ನಿಯಮಗಳುಂಟು. ಅವು:—(೧) ಅಭಿನಿವೇಶ, ಅಥವಾ ಛಲಧರ್ಮ, (೨) ಪ್ರತಿಭಟನ ಧರ್ಮ, ಮತ್ತು (೩) ಪುನರಾವರ್ತನ ಧರ್ಮ;

ಅದರಂತೆಯೆ ಮೂರು ಸಾಧಕ ನಿಯಮಗಳೂ ಉಂಟು. ಅವು:— (೧) ಕ್ರಮ ಪ್ರಗತಿಯ ನಿಯಮ, (೨) ಏಕಮುಖೀ ಪ್ರಗತಿಯ ನಿಯಮ, ಮತ್ತು (೩) ಗೂಢ ಪ್ರಗತಿಯ ನಿಯಮ.

**ಅಭಿನಿವೇಶ ಅಥವಾ ಛಲಹಿಡಿಯುವಿಕೆ** ಎಂಬುದರ ನಿಯಮವು (Law of persistence) ಹೀಗಿದೆ:— ಯಾವದಾದ ರೊಂದು ನಿಯಮ, ರೂಢಿ ಅಥವಾ ವೃತ್ತಿಯು ಒಮ್ಮೆ ಸ್ಥಾಪಿತ ವಾಯಿತೆಂದರೆ ಬಳಿಕ ಅದಕ್ಕೆ ಬದುಕಿ ಉಳಿಯುವ ಬಾಧ್ಯತೆಯೇ ಬಂದು ಬಿಡುತ್ತದೆ. ಮಾರ್ಪಡುವುದಕ್ಕಾಗಲಿ ಲೋಪಹೊಂದುವುದಕ್ಕಾಗಲಿ ಅದಕ್ಕೆ ನೈಸರ್ಗಿಕವಾದ ಅನಿಚ್ಛೆಯಿರುತ್ತದೆ. ಅದು ಸ್ಥಾಪಿತವಾಗುವು ದಕ್ಕೆ ಬಹುಕಾಲ ಬೇಕಾದಂತೆ ಉತ್ಪಾಟಿತವಾಗುವುದಕ್ಕೂ ಬಹುಕಾಲ ಬೇಕಾಗುತ್ತದೆ. ಮನುಷ್ಯನು ಷಡ್ರಿಪುಗಳಿಗೆ ಬಹುಜನ್ಮಗಳಿಂದ ಎಡೆಯನ್ನಿತ್ತಿರುತ್ತಾನಷ್ಟೆ? ಅವುಗಳನ್ನಾಳುವುದಕ್ಕಾಗಲಿ ತನ್ನನ್ನು ಶುದ್ಧಗೊಳಿಸಿಕೊಳ್ಳುವುದಕ್ಕಾಗಲಿ ಆತನು ಯಾವ ವಿಧದ ಮಹ ತ್ಪ್ರಯತ್ನವನ್ನೂ ಮಾಡಿಲ್ಲ. ಹೀಗೆಂದಮೇಲೆ ಕೇವಲ ಇಚ್ಛಾಮಾತ್ರ ದಿಂದ ಇಲ್ಲವೆ ತೀವ್ರ ಪ್ರಯತ್ನದಿಂದ ಅವುಗಳನ್ನು ಹೊಡೆದೋಡಿಸಿ ತಾನು ಶುದ್ಧನೂ, ಶಾಂತನೂ ಆಗುವುದಕ್ಕೆ ಆತನಿಗೆ ಶಕ್ಯವಿಲ್ಲ. ತಮ್ಮ ಮೇಲೆ ಹೀಗೆ ಸವಾರಿ ಮಾಡಲಿಕ್ಕೆ ಅವು ಸಮ್ಮತಿಸುವದಿಲ್ಲ. "ನೀವು ನಮಗೆ ಈ ಅಧಾರದಲ್ಲಿ ಒಡೆತನವನ್ನು ಕೊಟ್ಟಿದ್ದೀರಿ. ಆದ್ದರಿಂದ ನಾವು ಹಟ ಹಿಡಿಯತಕ್ಕವರೇ" ಎಂದು ಅವು ಅನ್ನುತ್ತವೆ. ಜಡ ಪ್ರಕೃತಿಯ ನಿಯಮಗಳೆಂದು ಜನರು ಅನ್ನುವ ದೇಹಧರ್ಮಗಳನ್ನು ನಿವಾರಿಸುವುದಂತೂ ಇದಕ್ಕಿಂತ ಬಿಗಿ.

ಆದರೆ ಸಂಕಲ್ಪಶಕ್ತಿಯು ಸರ್ವಸಮರ್ಥವಿದೆ. ತಾಳ್ಮೆಯಿಂದಲೂ, ಸ್ಥೈರ್ಯದಿಂದಲೂ, ಧೈರ್ಯದಿಂದಲೂ, ಅಭ್ಯಾಸವನ್ನು ನಡೆಯಿಸಿದರೆ ಅದು ಜಯಶಾಲಿಯಾಗುವದು. ಯಾಕೆಂದರೆ, ಸಂಕಲ್ಪಶಕ್ತಿಯು ಸ್ವಯಂ ಕಾಲಿಯೇ ಆಗಿದ್ದಾಳೆಂದು ನಾನು ಪುನಃ ಹೇಳುತ್ತೇನೆ.

ಆದ್ದರಿಂದ ಕೊನೆಗೆ ಅದು ತನ್ನ ದುಡಿಮೆಯಿಂದ ಹೊಸ ನಿಯಮ, ರೂಢಿ, ವೃತ್ತಿಗಳನ್ನು ನೆಲೆಗೊಳಿಸುತ್ತದೆ. ಅವು ಕಾದಾಡಿ ಮೆಲ್ಲ ಮೆಲ್ಲನೆ ಮೊದಲಿನವುಗಳನ್ನು ಸೋಲಿಸಿಬಿಡುತ್ತವೆ.

ಆಮೇಲೆ ಘಟಿಸುವುದೇನೆಂದರೆ— ತಗ್ಗಿಸಲ್ಪಟ್ಟು ಬಲಹೀನವಾಗಿದ್ದರೂ, ಪ್ರಕೃತಿಯ ಮುಖ್ಯಭಾಗದಿಂದ ದೂರಗತವಾಗಿದ್ದರೂ ಆ ಮುಂಚಿನ ಪರಿಪಾಠಾದಿಗಳು ಆಧಾರದಿಂದ ಹೊರಬಿದ್ದು ಹೋಗುವುದಕ್ಕೆ ಒಲ್ಲದೆ ಪ್ರತಿಭಟಿಸತೊಡಗುವವು. ಅವುಗಳಿಗೆ ನಿಮ್ಮ ಸುತ್ತುಮುತ್ತಲಿದ್ದುಕೊಂಡು ನಿಮ್ಮ ಭೋಗಾನುಭೋಗಗಳ ಮೇಲೆ ಉಪಜೀವಿಸಿಕೊಂಡಿರುವ ಶಕ್ತಿಗಳ ಅಥವಾ ಅತಿಭೌತಿಕ ಜೀವಗಳ ಪಡೆಯ ಬೆನ್ನಾಸರವೊಂದು ಇರುತ್ತದೆ.

ಈ **ಪ್ರತಿಭಟನ ಧರ್ಮವು** ( Law of resistence ) ಯೋಗದ ದ್ವಿತೀಯ ಕಾಲವನ್ನು ಸೂಚಿಸುತ್ತದೆ. ಸಂಕಲ್ಪಶಕ್ತಿಯು ಅಷ್ಟರಲ್ಲಿ ಸಿದ್ಧವಾಗಿ ಆಧಾರವು ಶುದ್ಧವಾಗಿ ಬಿಟ್ಟಿರದಿದ್ದರೆ ಸಾಧಕನಿಗೆ ಇದು ಬಹಳೇ ಶ್ರಮದ ಹಾಗು ತೊಂದರೆಯದಾಗಿರುತ್ತದೆ. ಯಾಕೆಂದರೆ ಪ್ರತಿಭಟನದ ಬಲಕ್ಕೆ ಮುಗಿತಾಯವೇ ಆಗಲಿಕ್ಕಿಲ್ಲವೆಂದು ತೋರುತ್ತಿರುತ್ತದೆ.

ಸಂಕಲ್ಪಶಕ್ತಿಗೆ, ಶ್ರದ್ಧೆ ಹಾಗೂ ಜ್ಞಾನ ಇವುಗಳ ಬೆಂಬಲವಿದ್ದರೆ ಅದು ಇಲ್ಲಿಯೂ ಗೆಲವಿಗಾಗಿ ಸಿದ್ಧವೇ ಇರುತ್ತದೆ.

ಆಗಲೂ ಕೂಡ— ಹೊರದೂಡಲ್ಪಟ್ಟ ಪರಿಪಾಠಗಳೂ ವೃತ್ತಿಗಳೂ ಆಧಾರಯಂತ್ರದಲ್ಲಿ ಪುನಃ ಪ್ರವೇಶಗೊಳ್ಳುವುದಕ್ಕೆ ನಿರಂತರವಾಗಿ ಹವಣಿಸುತ್ತಲಿರುತ್ತವೆ. ಅವು ತಮ್ಮ ಅಧಿಕಾರದ ಹಾಗೂ ಭೋಗದ ಸ್ಥಳಗಳನ್ನು ತಿರುಗಿ ಹುಡುಕಿಕೊಳ್ಳುವುದಕ್ಕೆ ಹೆಣಗುತ್ತವೆ. ಇದಕ್ಕೆ **ಪುನರಾವರ್ತನ**ವೆಂದು ( Law of recurrence ) ಅನ್ನುತ್ತಾರೆ.

ಎಷ್ಟರಮಟ್ಟಿಗೆ ಸಂಕಲ್ಪವು ಸಿದ್ಧವೂ, ಆಧಾರವು ಶುದ್ಧವೂ ಆಗಿರುವದೋ ಅಷ್ಟು ಪ್ರಮಾಣದಲ್ಲಿ ಪುನರಾವರ್ತನವು ದುರ್ಬಲ

ವಾಗಿರುತ್ತದೆ; ಪದೇಪದೇ ಹಿಂದಿರುಗಿ ಬರುವುದು ಕಡಿಮೆಯಾಗಿರು ತ್ತದೆ. ಅಥವಾ ಬಂದರೂ ಅಷ್ಟೊಂದು ಲಂಬಿಸುವದಿಲ್ಲ. ಆದರೆ ಅಶುದ್ಧ ಆಧಾರ ಮತ್ತು ಅಪೂರ್ಣ ಸಂಕಲ್ಪಶಕ್ತಿ ಇರುವಲ್ಲಿ ಪುನರಾವರ್ತನವು ಪ್ರತಿಭಟನದಂತೆಯೆ ದೀರ್ಘವೂ ಕಷ್ಟಕರವೂ ಆಗಿರುತ್ತದೆ.

ಇನ್ನೊಂದು ದಿಶೆಯಲ್ಲಿ ಮೂರು ಸಾನುಕೂಲ ನಿಯಮ ಗಳುಂಟು.

ಹೊಸ ಪರಿಪಾಠ ಅಥವಾ ಹೊಸ ವೃತಿಯು ಒಮ್ಮೆ ಸ್ಥಾಪಿತ ವಾದರೆ ಅದು ಸಬಲತೆ ಮತ್ತು ಪರಿಪೂರ್ಣತೆಯ ನಿಟ್ಟಿಗೆ ವಿಕಾಸ ವಾಗುತ್ತಲಿರುವದೊಂದು ನಿಯಮವೇ ಆಗಿದೆ. ಆದರೆ ಅದು ತನ್ನ ಸ್ಥಾಪನೆಗಾಗಿ ತಾನು ಹೋರಾಡುತ್ತಿರುವಷ್ಟು ಕಾಲದಲ್ಲೆಲ್ಲ ಯೋಗಿಯು ಪದಭ್ರಷ್ಟನಾಗುವ ಸಂಭವವು ಸರ್ವದಾ ಇರುತ್ತದೆ. ಯಾಕೆಂದರೆ ಪ್ರಮಾದ, ಬಲಹೀನತೆ ಮತ್ತು ಉತಾವಳಿತನ ಇವುಗಳ ಮೂಲಕ ಆತನು ಪರಿಶ್ರಮವನ್ನೇ ಪರಿತ್ಯಜಿಸುವ ಸಂಭವವಿದೆ. ಇದು ಮಾತ್ರ ಆತನ ಕೇವಲ ಪತನವು. ಪರಿಶ್ರಮದ ಪರಿತ್ಯಾಗದಿಂದ ಮಾತ್ರವಲ್ಲದೆ ಕಾರ್ಯವಿಘಟನೆ ಅಥವಾ ತಾತ್ಕಾಲಿಕ ಪರಾಜಯ ದಿಂದ ಎಂದೂ ಭ್ರಂಶವಾಗಲಾರದು. ಒಮ್ಮೆ ಉಚಿತವೃತ್ತಿಯು (Right tendency) ಸ್ಥಾಪಿತವಾಯಿತೆಂದರೆ ಮನುಷ್ಯನು ಅದರ ಅತ್ಯುಚ್ಚದಶೆಯನ್ನೂ ಭೋಗವನ್ನೂ ಉಂಡು ತೀರಿಸುವವರೆಗೆ ಅದನ್ನು ನಾಶಗೊಳಿಸಲಾರನು.

ಆದರೆ ಮೊಟ್ಟಮೊದಲಿಗೆ–ಸಂಕಲ್ಪಶಕ್ತಿಯು ದುರ್ಬಲವೂ ಅನಭ್ಯ ಸ್ತವೂ ಆಗಿರುವಷ್ಟು ಕಾಲ ಪ್ರಗತಿಯೂ ಮಂದವಾಗಿರಲೇಬೇಕಷ್ಟೆ. ಸಂಕಲ್ಪಶಕ್ತಿಯು ಸಂಪೂರ್ಣತೆಯು ಆಧಾರ ಶುದ್ಧಿಯನ್ನು ಸಾಧಿಸುತ್ತ ಬಂದ ಹಾಗೆಲ್ಲ ಪ್ರಗತಿಯೂ ವೇಗವಾಗುತ್ತದೆ.

ಈ ಜಗತ್ತಿನೊಳಗಿನ ಪ್ರತಿಯೊಂದು ಸಂಗತಿಯು ಒಂದು ಪದ್ಧತಿ ಯಿಂದಲೆ ನಿರ್ಮಿತವಾಗಿರುತ್ತದೆ. ಪದ್ಧತಿ ಅಥವಾ ಪ್ರಗತಿ (Process)

ಎಂಬುದು–ಗೊತ್ತುಪಡಿಸಿದ ಮೆಟ್ಟಲುಗಳ ಕ್ರಮದಿಂದ ಒಂದು ವಿಶಿಷ್ಟ ಫಲಿತಾಂಶದವರೆಗೆ ಸಾಗುವ ಕ್ರಿಯಾಮಾಲಿಕೆಯೇ ಆಗಿದೆ. ಈ ಮೆಟ್ಟಲುಗಳನ್ನು ಮೆಲ್ಲನೆಯಾಗಲಿ ತ್ವರೆಯಿಂದಾಗಲಿ ದಾಟಬಹುದು.

ಆದರೆ **ಕ್ರಮಪ್ರಗತಿಯ ನಿಯಮ** ( Law of gradual process ) ದಿಂದ ಸಾಗುತ್ತಿರುವಾಗ ಎಲ್ಲ ಮೆಟ್ಟಲುಗಳನ್ನು ಒಂದೊಂದಾಗಿ ಕಂಡು ಕಂಡು ದಾಟಬೇಕಾಗುವದು. ನೀವು ದಾಟಬೇಕಾದ ಮೈಲುಗಲ್ಲುಗಳು ಎಷ್ಟೋ ಇವೆ. ಕಾಲುನಡಿಗೆಯಿಂದಾಗಲಿ, ಬಂಡಿಯಿಂದಾಗಲಿ ಅಥವಾ ಉಗಿಬಂಡಿಯಿಂದಾಗಲಿ ನೀವು ಪ್ರವಾಸ ಮಾಡಬಹುದು; ಏನಿದ್ದರೂ ಅವುಗಳನ್ನು ದಾಟಬೇಕೆಂಬದು ನಿಶ್ಚಿತ.

ಸಂಕಲ್ಪಶಕ್ತಿಯ ಬಲವು ಬೆಳೆದ ಬಳಿಕ ಮುಂದಗತಿಯ ಸ್ಥಳವನ್ನು ತ್ವರಗತಿಯು ಆಕ್ರಮಿಸಬಲ್ಲದು. ಯಾವಾಗ ಕಾಲಿಯು ಮಾನವನ ಶಕ್ತಿಯಾಗಿರುವುದಕ್ಕೆ ಬದಲಾಗಿ ಮಾನವನೊಳಗಿರುವ ದೇವನ ಶಕ್ತಿಯಾಗಿ, ಸಾಮಾನ್ಯವಾದ ಮಾನವೀ ಸೀಮಾಬದ್ಧತೆಗಳನ್ನು ಸರ್ವೋಚ್ಚಕ್ಕೆ ಏರಿಸಲಾರಂಭಿಸುವಳೋ ಆಗ ಒಂದು ಕಾಲ ಬರುವದು. ಆಗ ಕ್ರಮಪ್ರಗತಿಯ ಬದಲಾಗಿ ಏಕಮುಖೀ ಪ್ರಗತಿಯು ( Concentrated process ) ಆರಂಭವಾಗುವದು.

ಒಂದು ಮೈಲುಗಲ್ಲಿನಿಂದ ಇನ್ನೊಂದು ಮೈಲುಗಲ್ಲಿಗೆ ಸಾಗುತ್ತ ಪ್ರವಾಸಗೆಯ್ಯುವ ಬದಲು ಮೊದಲನೆಯದರಿಂದ ಮೂರನೆಯದಕ್ಕೆ ( ಮೂರನೆಯದರಿಂದ ಆರನೆಯದಕ್ಕೆ ) ಹೀಗೆಯೆ ಮುಂದುಮುಂದಕ್ಕೆ ನಿಮ್ಮ ಯಾತ್ರೆಯು ಕೊನೆಯವರೆಗೆ ಜಿಗಿಯುತ್ತ ಹೋಗಬಹುದು. ಬೇರೆ ಮಾತಿನಿಂದ ಹೇಳಬೇಕಾದರೆ–ಪದ್ಧತಿಯು ಮೊದಲಿನದೇ ಆಗಿದ್ದರೂ ಕೆಲವೊಂದು ನೆಲೆಗಳು ಬಿಡಲ್ಪಟ್ಟ ಹಾಗೆ ಕಾಣುವದು. ವಾಸ್ತವಿಕವಾಗಿ ಅವು ವರ್ಜಿಸಲ್ಪಟ್ಟಿರದೆ ಲಕ್ಷ್ಯಕ್ಕೆ ಬಾರದಂತೆ ಅಲ್ಪಕಾಲದಲ್ಲಿಯೇ ಅವು ದಾಟಿ ಹೋಗಿರುತ್ತಿರುತ್ತವೆ. ಆದುದರಿಂದಲೇ ಅದಕ್ಕೆ ಏಕಮುಖೀ ಅಥವಾ ಕ್ಷಿಪ್ರಪ್ರಗತಿಯೆಂದು ಹೆಸರು.

ಕೊನೆಯಲ್ಲಿ ಮಾನವನು ತನ್ನ ಕೃತಿತ್ವದ ಒಂದು ಅಂಶದಲ್ಲಾಗಲಿ ಅಥವಾ ಸರ್ವಾಂಶದಿಂದಾಗಲಿ ಯಾವಾಗ ತಾನೇ ದೇವನೇ ಆಗಿ ಬಿಡುವನೋ ಆಗ ಏಕಮುಖೀ ಪ್ರಗತಿಯು ಗೂಢಪ್ರಗತಿಗೆ (Involved process) ಸ್ಥಳವನ್ನು ಕೊಡುವದು. ಆಗ ಪದ್ಧತಿಯನ್ನು ಪ್ರಯೋಗಿಸಿದಂತೆ ತೋರುವದೇ ಇಲ್ಲ. ಫಲಿತಾಂಶವು ತನ್ನಿಂದ ತಾನೇ ಅನಿವಾರ್ಯವಾಗಿ ಅಲೌಕಿಕ ರೀತಿಯಿಂದ ಕರ್ಮದ ಬೆನ್ನು ಹತ್ತುವದು.

ಇದರಲ್ಲಿ ವಾಸ್ತವಿಕವಾಗಿ ಅಲೌಕಿಕ ಚಮತ್ಕಾರವೇನೂ ಇಲ್ಲ. ಇಲ್ಲಿ ಪದ್ಧತಿಯನ್ನು ಎಷ್ಟು ವೇಗವಾಗಿ ಮತ್ತು ಪರವಾವಧಿ ಸುಲಭವಾಗಿ ಉಪಯೋಗಿಸಲಾಗುವದೆಂದರೆ ಕ್ಷಣಮಾತ್ರದಲ್ಲಿ ಜರಗುವ ಕೃತಿಯೊಳಗೆ ಅದು ಅಡಗಿ ಹೋದಂತೆ ತೋರುತ್ತದೆ.

**ಬಹುಜನರಿಗೆ-ಶಕ್ಯವಾದರೆ ಎರಡನೆಯ ಭೂಮಿಕೆಯನ್ನು ಮಾತ್ರ ಮುಟ್ಟುವುದಕ್ಕಾಗುತ್ತದೆ. ಮೂರನೆಯದನ್ನು ಮುಟ್ಟುವುದಕ್ಕೆ ಕೇವಲ ಅವತಾರಿಗೆ ಇಲ್ಲವೆ ಮಹಾವಿಭೂತಿಗೆ ಮಾತ್ರ ಸಾಧ್ಯವಿದೆ.**

ಆದುದರಿಂದ ಯಾವ ಬಗೆಯ ಕೊರತೆಗಾಗಲಿ ವಿಲಂಬಕ್ಕಾಗಲಿ ಎದೆಗೆಡಬೇಡಿರಿ. ಅದು ಕೇವಲ ಸಂಕಲ್ಪಶಕ್ತಿಯ ಬಲ ಮತ್ತು ಶುದ್ಧತೆ ಇವುಗಳ ಪ್ರಶ್ನವಾಗಿದೆ.

ಶುದ್ಧತೆಯೆಂದರೆ ವಾಸನೆ, ಹೋರಾಟ, ಸಂಕರ ಇವುಗಳಿಂದ ಸ್ವತಂತ್ರವಾಗುವದೇ ಎಂದು ನಾನು ತಿಳಿಯುತ್ತೇನೆ. ಸಂಕಲ್ಪಶಕ್ತಿಯ ಸ್ವಶುದ್ಧೀಕರಣಾರ್ಥವಾಗಿ ಏಕಾಭಿಮುಖೀ ಪ್ರಯತ್ನದಿಂದ ಆರಂಭಮಾಡುವುದು ಉತ್ತಮ.

ಇದರ ಸಲುವಾಗಿ ಮೊಟ್ಟಮೊದಲನೆಯ ಆಗತ್ಯವೆಂದರೆ ಫಲಾಶೆಯ ವಿಷಯದಲ್ಲಿ ತಟಸ್ಥವೃತ್ತಿ, ಎರಡನೆಯ ಆವಶ್ಯಕತೆಯೆಂದರೆ ಸಂಕಲ್ಪ ಶಕ್ತಿಯು ಉಪಯೋಗಕ್ಕೆ ಬರುವವರೆಗೆ ಚಿತ್ತ ಮತ್ತು ಬುದ್ಧಿ

ಇವುಗಳ ತಾಟಸ್ಥ್ಯ. ಮೂರನೆಯದು ಸಂಕಲ್ಪಶಕ್ತಿಯ ಉಪಯೋಗಾರ್ಥವಾಗಿ ಆತ್ಮಜ್ಞಾನದ ವಿಕಾಸ.

ಸಂಕಲ್ಪಶಕ್ತಿಯ ಅಭ್ಯಾಸದ ಈ ಪದ್ಧತಿಯಿಂದ ಆತ್ಮಾಸಂ—ಆತ್ಮನಾ— ಆಧಾರಶುದ್ಧಿಯು ಪೂರ್ವಸಿದ್ಧತೆಯೂ ಕೂಡ ತನ್ನಿಂದ ತಾನೇ ನಡಿಯುವದು; ಮತ್ತು ಜ್ಞಾನವು ವಿಕಸಿತವೂ ಕೃತಿಶೀಲವೂ ಆಗಲಾರಂಭಿಸುವದು ಎಂದು ಕಂಡು ಬರುವದು.



# ೪ ಬುದ್ಧಿ

ಪ್ರಕರಣೋಪಕ್ರಮಣಿಕೆ:—

" ಮೊದಲಿಗೆ ಕಾಲಿ, ಬಳಿಕ ಸೂರ್ಯ, ಮುಂಚೆ ಶಕ್ತಿ, ಅನಂತರ ಜ್ಞಾನ." ಇದು ಗುರು ಅರವಿಂದರ ಪ್ರಸ್ತುತ ಗ್ರಂಥದ ಸುವರ್ಣ ಸೂತ್ರ.

ಯಾವದೊಂದು ವಸ್ತು, ವ್ಯಕ್ತಿ ಇಲ್ಲವೆ ವಿಷಯ ಇವು ನಮ್ಮ ಸ್ಥೂಲಬುದ್ಧಿಗೆ ಒಂದು ಬಗೆಯಿಂದ ತೋರುತ್ತವೆ; ಸೂಕ್ಷ್ಮ ಬುದ್ಧಿಯಿಂದ ಪರ್ಯಾಲೋಚಿಸಿದ ರೆಅವುಗಳ ಸತ್ಯಾಂಶವು ಇನ್ನೂ ಏನೇನೋ ಇರಬಹುದೆಂಬ ಊಹೆಯುಂಟಾಗುತ್ತದೆ; ಬಳಿಕ ಯೋಗ ಲಬ್ಧ ಅಂತರ್ದೃಷ್ಟಿಯಿಂದ ನೋಡಿದರೆ ಮೂರನೆಯದೊಂದು ಬೇರೆ ವಿಧವೇ ಪ್ರತೀತವಾಗುತ್ತದೆ. ಮೊದಲನೆಯದು ತೋರಿಕೆ ಮಾತ್ರ; ಎರಡನೆಯದು ಸಂಭವವನ್ನು ಸೂಚಿಸುವದು; ಕೊನೆಯದೇ ನಿಜವಾದ ವಾಸ್ತವಿಕ ಜ್ಞಾನವು. ಪಿಂಡಸ್ಥ ಪರಮೇಶ್ವರನು ಈ ನಿಜ ಜ್ಞಾನವನ್ನೇ ಉಪಯೋಗಿಸುತ್ತಿರುತ್ತಾನಂತೆ.

" ಭಗವಂತನು (ಪಿಂಡಸ್ಥ) ಮೊಟ್ಟಮೊದಲಿಗೆ ವಸ್ತುವಿನ ಮೂಲಸ್ವರೂಪವಾದ ಕಾರಣವನ್ನು ಕಂಡು

ಕೊಳ್ಳುತ್ತಾನೆ; ಬಳಿಕ ನಾನಾ ಕಲ್ಪನಾ ಸಂಭಾವನೆಗಳ ಛಾಯಾಮಯ ಕ್ರೀಡೆ, ಕೊನೆಗೆ ಪದಾರ್ಥೀಕರಣ ಅಥವಾ ಸ್ಥೂಲಕಾರ್ಯ, ಇವುಗಳನ್ನು ಕಾಣುತ್ತಾನೆ. (೧) ಅವಶ್ಯಂಭಾವಿಯಾದ ಅಧ್ಯಾತ್ಮಸತ್ಯ (*Imperative truth*), (೨) ಶಕ್ಯ ಸಂಭವಗಳ ಸೂಕ್ಷ್ಮ ಸತ್ಯ (*Possible Potential Psychical truth*), ಕೊನೆಗೆ (೩) ಸ್ಥೂಲ ಭೌತಿಕ ಸತ್ಯ (*Physical truth*). ನಾವಾದರೋ ಎಲ್ಲವನ್ನು ಇವರ ವಿಪರೀತ ದಿಕ್ಕಿನಿಂದ ನೋಡುತ್ತೇವೆ. ಮೊದಲಿಗೆ ಸ್ಥೂಲ ಪದಾರ್ಥೀಕರಣ ವನ್ನು ನೋಡುತ್ತೇವೆ, ಆ ಬಳಿಕ ಸೂಕ್ಷ್ಮ ಸಂಭಾವನೆ, ಕೊಟ್ಟಕೊನೆಗೆ ಅಧ್ಯಾತ್ಮ ಕಾರಣದಲ್ಲಿ ತಪ್ಪುಹೆಜ್ಜೆಯಿಡ ಲೆಳಸುವೆವು. ಆದುದರಿಂದಲೇ ಪೂರ್ಣ ಸತ್ಯವನ್ನು ಕಂಡು ಕೊಳ್ಳುವುದು ನಮಗೆ ಇಷ್ಟೊಂದು ಕಠಿನವಾಗಿಬಿಟ್ಟಿದೆ. ದೈವೀ ದೃಷ್ಟಿಯು ಪ್ರಾಪ್ತವಾದರೆ ಆಗ ನಾವು ಯಥಾರ್ಥ ಸತ್ಯವನ್ನೂ ಅದರ ಸಕಲ ಸಂಭಾವನಾ ಕಲ್ಪನಾರಾಶಿ ಯನ್ನೂ, ಭೌತಿಕ ಸತ್ಯಪ್ರಕಟೀಕರಣವನ್ನೂ ಸಹ ಕಂಡು ಕೊಳ್ಳುವೆವು." ಎಂದು ಯೋಗೀಶ್ವರ ಅರವಿಂದರೇ ಒಂದೆಡೆಯಲ್ಲಿ ವಿವರಿಸಿದ್ದಾರೆ. ಜ್ಞಾನವೆಂಬುದು ಇದೇ.

ಸತ್, ಚಿತ್, ಆನಂದ ಇವು ಮೂರೂ ಕೂಡಿದ್ದು ಮಹಾಕಾರಣ; ವಿಜ್ಞಾನವು ಕಾರಣ; ಮನ-ಪ್ರಾಣಗಳು

ಸೂಕ್ಷ್ಮ; ಅನ್ನಂ ಅಥವಾ ಭೌತಿಕವು ಸ್ಥೂಲ. ಪಿಂಡಾಂಡದಲ್ಲಿಯೂ ಬ್ರಹಾಂಡದಲ್ಲಿಯೂ ಇದೇ ಕ್ರಮ ವಿದೆ. ಮಹಾಕಾರಣದ ಸತ್ ಅಥವಾ ಪರಬ್ರಹ್ಮ ಅಥವಾ ಪರಶಿವನಲ್ಲಿ ಸಕಲವೂ ಅವ್ಯಕ್ತದಶೆಯಲ್ಲಿರುತ್ತ ದಂತೆ; ಆದರೆ ಚಿತ್ ಅಥವಾ ಆದಿಶಕ್ತಿಯಲ್ಲಿ ಅದರ ಗರ್ಭವು ಹಿಡಿಯುವದಂತೆ. ಈ ಸಚ್ಚಿದಾನಂದ ಅಥವಾ ಮಹಾಕಾರಣದೊಳಗಿನ ಅಗಾಧ ಅಗತ್ಯವೇನೂ ಸದ್ಯಕ್ಕೆ ನಮಗಿಲ್ಲ. ಅದರ ಕೆಳಗಿನ ಕಾರಣ ಅಥವಾ ವಿಜ್ಞಾನ ದಲ್ಲಿ ಸಕಲ ನಾಮರೂಪ ಗುಣಕ್ರಿಯೆಗಳ ನಿಜ ಸ್ವರೂ ಪವು ನಿಧಿಯಾಗಿ ನಿಂತಿರುತ್ತದೆ. ಎಲ್ಲವೂ ಅಲ್ಲಿ ಅಮ ರವೂ ಶಾಶ್ವತವೂ ಆಗಿರುತ್ತದಂತೆ. ಅಲ್ಲಿಯಿಂದ ಭೌತಿಕ ಕ್ಷೇತ್ರಕ್ಕೆ-ಬರುವ ದಾರಿಯಲ್ಲಿ ಸೂಕ್ಷ್ಮದೊಳಗೆ ನಾನಾ ವಿಧದ ಚಲನವಲನಗಳುಂಟಾಗುತ್ತವೆ. ಅಲ್ಲಿ ನಿಶ್ಚಿತ ವೆಂಬುದನ್ನು ಕೇಳಬಾರದು. ಅಂತೇ ಅದಕ್ಕೆ ಅನೃತ ವೆಂದು ಸಹ ಅನ್ನಲಿಕ್ಕೆ ಬರುತ್ತದಂತೆ. ಬಳಿಕ ಕೊನೆಗೆ ಸ್ಥೂಲದಲ್ಲಿ ಆಂಶಿಕವಾಗಿ ಅದು ಘನೀಭವನವನ್ನು ಹೊಂದುತ್ತದೆ. ಈ ವಿವರಣೆಯು ಬ್ರಹಾಂಡದೊಳಗಿನ ಸೃಷ್ಟಿಕ್ರಮ ಮತ್ತು ಪಿಂಡಾಂಡದೊಳಗಿನ ಜ್ಞಾನಕ್ರಮ ಇವೆ ರಡಕ್ಕೂ ಸಮಾನವಾಗಿಯೇ ಸಮನ್ವಯಿಸುತ್ತದಂತೆ. ವಸ್ತುವಿನ ಸ್ಥೂಲಭಾಗದ ಜ್ಞಾನವೇ ಭೌತಿಕಶಾಸ್ತ್ರ,

ಸೂಕ್ಷ್ಮಭಾಗದ ಜ್ಞಾನವೇ ತತ್ವಶಾಸ್ತ್ರ, ಕಾರಣಭಾಗದ ಜ್ಞಾನವೇ ಯೋಗ ಶಾಸ್ತ್ರ. ನಮ್ಮೊಳಗಿನ ಸ್ಥೂಲ ಸೂಕ್ಷ್ಮ ಕಾರಣಗಳ ತ್ರಯಿಯೊಳಗೆ ಯಾವದಾದ ದೊಂದು ಕ್ಷೇತ್ರದಲ್ಲಿ ಯಾವದೊಂದು ವಸ್ತುವಿನ ಇಲ್ಲವೆ ವಿಷಯದ ಬಾಹ್ಯವನ್ನಾಗಲಿ ಮೂಲವನ್ನಾಗಲಿ ಅಂತರ್ಯ ವನ್ನಾಗಲಿ ಪ್ರತ್ಯಕ್ಷೀಕರಿಸಿಕೊಳ್ಳುವುದೇ ಒಂದಿಲ್ಲೊಂದು ಬಗೆಯ ಜ್ಞಾನವು. ಆದರೆ ನಮಗೀಗ ಬೇಕಾದದ್ದು ಎಲ್ಲಕ್ಕೂ ಮೊದಲಿಗೆ ಕಾರಣ ಜ್ಞಾನವು; ಬಳಿಕ ಅದರ ಸಂಸ್ಕಾರದಿಂದ ಪೂತವಾದ ಸೂಕ್ಷ್ಮ ಹಾಗೂ ಸ್ಥೂಲ ದರ್ಶನವು. ಓಂ ಶ್ರೀ ಓಂ.

ಜ್ಞಾನವೆಂಬುದು ಏನು? ಅದು ಹೇಗೆ ಉಂಟಾಗುವದು? ಪ್ರತ್ಯಕ್ಷವಾದ ಜ್ಞಾನ ಹಾಗೂ ಅದರ ಉಪಕರಣ ಇವೆರಡನ್ನೂ ನಾವು ಬಿಂಗಡಿಸಿ ನೋಡಲಿಕ್ಕೆಬೇಕು. ಇದಲ್ಲದೆ ಉಪಕರಣದಲ್ಲಿಯೂ ಅದರ ಯಂತ್ರವಿಭಾಗ ಮತ್ತು ಆಯಾ ಯಂತ್ರಗಳ ಕಾರ್ಯ ಇವು ಗಳನ್ನು ಪೃಥಕ್ಕರಿಸಿ ನೋಡಲು ಬೇಕು.

ನಮ್ಮ ಚೈತನ್ಯ ಅಥವಾ ಜಾಗೃತ ಪ್ರಜ್ಞೆಯಲ್ಲಿ ವಸ್ತುವನ್ನು ತಂದು ನಿಲ್ಲಿಸುವುದು ಅಥವಾ ಅದರ ಪರಿಚಯಹೊಂದುವುದು ಇದಕ್ಕೆ ನಾವು ಜ್ಞಾನವೆಂದು ತಿಳಿಯುತ್ತೇವೆ. ಆದರೆ ನಮ್ಮ ಚೈತನ್ಯದಲ್ಲಿ ಅದನ್ನು ತಂದು ನಿಲ್ಲಿಸುವುದು ಎಂದು ಅನ್ನುವದರಿಂದ ಏನು ಧ್ವನಿತ ವಾಗುತ್ತದೆ? ಯಾವಲ್ಲಿಯಿಂದ ಅದನ್ನು ಅಲ್ಲಿ ತಂದು ನಿಲ್ಲಿಸುತ್ತೇವೆ? ಯುರೋಪಿಯನ್ನರು 'ಹೊರಗಿನಿಂದ' ಎಂದು ಹೇಳುತ್ತಾರೆ; ಆದರೆ ನಾವು 'ಒಳಗಿನಿಂದ—ಚೈತನ್ಯದೊಳಗಿಂದಲೇ' ಎಂದು ಹೇಳುವೆವು. ಬೇರೆ ಮಾತಿನಲ್ಲಿ ಹೇಳಬಹುದಾದರೆ—ಚೈತನ್ಯದೊಳಗಿನದೇ ಏನೋ ಒಂದರ ಮೇಲೆ ಚೈತನ್ಯದ ಕ್ರಿಯೆಯು ಕಾರ್ಯಕಾರಿಯಾಗುವದೇ ಜ್ಞಾನ.

ಪ್ರಥಮಸ್ಥಾನದಲ್ಲಿ ಪ್ರತಿಯೊಂದು ಮಾತೂ ಅವಿಭಾಜ್ಯವೂ ಸಾರ್ವತ್ರಿಕವೂ ಆದ ನಮ್ಮ ಸ್ವಯಂಭೂ ಅಸ್ತಿತ್ವದಲ್ಲಿ ಅಥವಾ ಪರಬ್ರಹ್ಮನಲ್ಲಿ ಇರುವದೆಂಬುದನ್ನು ನಾವು ಬಲ್ಲೆವು. ಅಲ್ಲಿ ಅದು ಪ್ರಕಟ ದಶೆಗೆ ಬಾರದೆ ಅವ್ಯಕ್ತ ಸ್ವರೂಪದಿಂದ ಇರುತ್ತದೆ. ಬಳಿಕ ಅದು ವಸ್ತುಮಾತ್ರಗಳ ಗರ್ಭವಾದ ಕೇವಲ ಚಿತ್ ಎಂಬಲ್ಲಿ ಆಕಾರ–ನಾಮ–ಗುಣ ಇವುಗಳ ಮೂಲಭಾವದ ದಶೆಯಲ್ಲಿರುತ್ತದೆ. ಬಳಿಕ ಅದಕ್ಕೆ ಚೈತನ್ಯದ ಮೌಲಿಕ ಲಾಕ್ಷಣಿಕ ಹಾಗೂ ಆದರ್ಶಮಯ ಅವಸ್ಥೆಯಾದ ಕಾರಣ ಅಥವಾ ಮಹತ್ ಎಂಬಲ್ಲಿ ನಾಮ–ರೂಪ–ಗುಣಗಳು ಪ್ರಾಪ್ತವಾಗುತ್ತವೆ. ಅಲ್ಲಿಂದ ಮುಂದೆ ಚೈತನ್ಯದ ತರಲ ಅವಸ್ಥೆಯಾದ ಸೂಕ್ಷ್ಮ ಅಥವಾ ಮಾನಸದಲ್ಲಿ ಅದಕ್ಕೆ ಪಲ್ಲಟ, ವಿಕಾಸ ಮತ್ತು ರೂಪಾಂತರಗಳ ಶಕ್ಯತೆಯುಂಟಾಗುತ್ತದೆ. ಕೊನೆಗೆ ಚೈತನ್ಯದ ಭೌತಿಕ ಅಥವಾ ಕ್ರಮವಿಕಾಸದ (Evolutionary) ಅವಸ್ಥೆಯಾದ ಸ್ಥೂಲವೆಂಬುದರಲ್ಲಿ ಅದು ಕಾರ್ಯತಃ ಪಲ್ಲಟ, ವಿಕಾಸ, ರೂಪಾಂತರ ಅಥವಾ ಕ್ರಮಪರಿಣತಿಯನ್ನು ಹೊಂದುತ್ತದೆ.

ಕಾರಣವು 'ಸತ್ಯಂ' ಆಗಿದೆ. ಸೂಕ್ಷ್ಮದಲ್ಲಿ ಬದಲಾವಣೆಯ ಪೂರ್ವಸಿದ್ಧತೆಯು ನಡೆಯುತ್ತದೆ. ಇದು ಕಲ್ಪಿತ ಅಥವಾ ಅನೃತ ('ಋತಂ' ಎಂಬುದರ ಅಭಾವ) ದಿಂದ ತುಂಬಿ ಬಿಟ್ಟಿರುತ್ತದೆ. ಆದುದರಿಂದ ಇದು ಸ್ವಪ್ನಸ್ವರೂಪವಾಗಿದೆ, ಆದರೂ ವಾಸ್ತವಿಕವಾದ ಅಸತ್ಯವಲ್ಲ. ಆದರೆ ಕೂಡಲೆ ಇದನ್ನು ಕಾರಣಕ್ಕಾಗಲಿ ಸ್ಥೂಲಕ್ಕಾಗಲಿ ಸಮನ್ವಯಿಸಲಿಕ್ಕಾಗುವದಿಲ್ಲ.

ಸ್ಥೂಲದಲ್ಲಿ ಎಲ್ಲವೂ ಕ್ರಮಪರಿಣತಿಯನ್ನು ಹೊಂದುತ್ತಲಿರುತ್ತದೆ. ಪೂರ್ವದ ಭೌತಿಕ ಸತ್ಯವನ್ನು ಅನೃತಕ್ಕೆ ಹೊರಳಿಸುವ ನಾಶ ಮತ್ತು ಹೊಸ ಅನೃತವನ್ನು ಹೊಸ ಭೌತಿಕ ಸತ್ಯಕ್ಕೆ ತಿರುಗಿಸುವ ನಿರ್ಮಾಣ ಇವೆರಡರ ಮುಖಾಂತರವಾಗಿ ಅಂಶಿಕ ಸತ್ಯವು ವಿಕಾಸ ಹೊಂದುತ್ತಿರುತ್ತದೆ.

ಕಾರಣದಲ್ಲಿ ನಿರ್ಮಾಣ–ನಾಶಗಳಿಲ್ಲ, ಜನನ– ಮರಣಗಳಿಲ್ಲ. ಎಲ್ಲವೂ ಅಲ್ಲಿ ಸರ್ವದಾ ಶಾಶ್ವತವಾಗಿರುತ್ತದೆ. ಬದಲಾವಣೆಯೆಂಬುದು ಒಂದು ರೂಪದಿಂದ ಇನ್ನೊಂದು ರೂಪಕ್ಕೆ ಅಥವಾ ಒಂದು ಪೂರ್ಣತೆ ಯಿಂದ ಮತ್ತೊಂದು ಪೂರ್ಣತೆಗೆ ಮಾತ್ರ, ಇಷ್ಟೇ.

ಆದುದರಿಂದ ಅರಿಯುವುದೆಂದರೆ ವಾಸ್ತವಿಕವಾಗಿ ವಸ್ತುವಿನ ಬಗೆಗೆ ಈ ಎಲ್ಲ ಕ್ಷೇತ್ರಗಳಲ್ಲಿ ಅಥವಾ ಯಾವದೊಂದರಲ್ಲಿ ಭಾನ ವನ್ನುಂಟುಮಾಡಿಕೊಳ್ಳುವದೇ ಆಗಿದೆ. ಸ್ಥೂಲದ ಜ್ಞಾನವು ಭೌತಿಕ ಶಾಸ್ತ್ರವು ( Science ); ತತ್ವಶಾಸ್ತ್ರವೂ ಧರ್ಮವೂ ಸೂಕ್ಷ್ಮದ ಜ್ಞಾನವು; ಕಾರಣದ ಜ್ಞಾನವು ಯೋಗವು.

ಯಾವಾಗ ಮಾನವನು ಸ್ಥೂಲವನ್ನು ಅರಿಯುವನೋ ಆಗ ಅವನು ಅದನ್ನು ತನ್ನ ಇಂದ್ರಿಯಗಳಿಂದ ಅರ್ಥಾತ್ **ಮನ**ದ ಸಹಾಯ ದಿಂದ ಅರಿಯುವನು; ಸೂಕ್ಷ್ಮವನ್ನು ವಿಚಾರ ಅಥವಾ ಉತ್ತೇಜಿತ ಬುದ್ಧಿಯ ಸಹಾಯದಿಂದ ಅರಿಯುತ್ತಾನೆ. **ಆತನು ಕಾರಣವನ್ನು ಜ್ಞಾನ ಅಥವಾ ಆಧ್ಯಾತ್ಮಿಕ ಪ್ರತೀತಿಯ ಸಹಾಯದಿಂದ ಅರಿಯುವನು.** ಆದ್ದರಿಂದ ಸಂಪೂರ್ಣ ಜ್ಞಾನವೆಂಬುದು ಮೂರು ಕ್ರಿಯೆಗಳನ್ನವಲಂಬಿಸಿರುತ್ತದೆ. ಮೊದಲಿಗೆ ಬಾಹ್ಯಿಕ ಉಪಲಬ್ಧಿ ಅಥವಾ ಬಾಹ್ಯ ಪ್ರತೀತಿ, ಎರಡನೆಯದಾಗಿ ವಸ್ತುವಿನ ವಿಷಯದಲ್ಲಿ ನಿಮಗುಂಟಾದ ತಿಳುವಳಿಕೆಯ ಬೌದ್ಧಿಕ ವಿವರ ( Intellectual statement ), ಮೂರನೆಯದಾಗಿ ಆಂತರಿಕ ಉಪಲಬ್ಧಿ ಅಥವಾ ಆಧ್ಯಾತ್ಮಿಕ ಪ್ರತೀತಿ.

ಭೌತಿಕ ಶಾಸ್ತ್ರಜ್ಞನು ಬುಡದಿಂದ ಮೊದಲುಮಾಡಿ ಶಕ್ಯವಾದರೆ ತುದಿಗೆ ಏರುವನು. ಆದರೆ ಯೋಗಿಯು ತುದಿಯಿಂದ ಆರಂಭಿಸಿ ಪೂರ್ಣವಾಗಿ ಪ್ರಮಾಣೀಕರಿಸುವುದಕ್ಕಾಗಿ ತಳಕ್ಕೆ ಇಳಿಯುವನು. ನೀವು ಭೌತಿಕ ಶಾಸ್ತ್ರದವರಲ್ಲ, ಸಾಧಕರಿದ್ದೀರಿ. ಆದ್ದರಿಂದ ನೀವು ಜ್ಞಾನದ ಬಗೆಗೆ ಮಾತನಾಡುವಾಗ ಅದರ ಕ್ರಮಪದ್ಧತಿಯನ್ನು ತಿಳಿದು ಕೊಳ್ಳಲು ಬೇಕು. ನೀವು ವಿಷಯವನ್ನು ಆಂತರಿಕ ಅನುಭೂತಿ

ಅಥವಾ 'ಭಾವ'ದ ಸಹಾಯದಿಂದ ಸ್ವಾನುಭವಿಸುವಿರಿ. (ಭಾವ ಮತ್ತು ಭಾವನೆ ಎರಡೂ ಒಂದೇ ಅಲ್ಲ.)* ಆ ಮೇಲೆ ಆ ಪರ ವಿಷಯದಲ್ಲಿ ವಿಚಾರ ನಡಿಸಿ ನಿಮ್ಮ ಸ್ವಾನುಭವವನ್ನು ಅರ್ಥ ಮತ್ತು ವಾಚಾಕಾರಕ್ಕೆ ತರುವಿರಿ. ಈ ವಾಗರ್ಥಗಳ ಸಮೀಕರಣವೇ ವಿಚಾರವನ್ನು ರೂಪಿಸುವದು. ಬಳಿಕ ಬಾಹ್ಯಪ್ರತೀತಿಯ ನೆರವಿನಿಂದ ನಿಮ್ಮ ಸ್ವಾನುಭವವನ್ನು ಪ್ರತ್ಯಕ್ಷದಲ್ಲಿ ಪ್ರಮಾಣಿಸಿಕೊಳ್ಳುವಿರಿ.

ಉದಾಹರಣಾರ್ಥವಾಗಿ— ನೀವು ಒಬ್ಬ ಮನುಷ್ಯನನ್ನು ಕಾಣುತ್ತಿದ್ದೀರಿ. ಆತನು ಹೇಗೆ ಇದ್ದಾನೆ, ಏನೇನು ಆಲೋಚಿಸುತ್ತಾನೆ, ಏನು ಮಾಡುತ್ತಿರುತ್ತಾನೆ— ಎಂಬುದನ್ನು ನೀವು ತಿಳಿದುಕೊಳ್ಳ ಬಯಸುವಿರಿ. ಭೌತಿಕ ವಿಚಾರದ ಮನುಷ್ಯನು ಈಗ ಏನೇನು ನಡೆಯಿಸುವನು? ಅವನು ಆ ಮನುಷ್ಯನನ್ನು ನಿರೀಕ್ಷಿಸತೊಡಗುವನು. ಅವನು ಏನೇನು ಹೇಳುವನು, ಅವನ ಮಾತೂ ಮುಖವೂ ಏನೇನು ಹೊರಪಡಿಸುವದು, ಅವನ ಕೃತಿಗಳೆಂಥವು, ಎಂಥವರ ಜೊತೆಯಲ್ಲಿ ಇರುತ್ತಿರುವನು— ಮುಂತಾದ ವಿಷಯಗಳನ್ನೆಲ್ಲ ಲಕ್ಷಿಸುವನು. ಇವೆಲ್ಲವೂ ಬಾಹ್ಯಿಕ. ಬಳಿಕ ಆತನು ತನ್ನ ಈ ಬಾಹ್ಯಿಕ ಪ್ರತೀತಿಯ ಆಧಾರದಿಂದ ತರ್ಕಮಾಡುವದಕ್ಕೆ ಆರಂಭಿಸುತ್ತಾನೆ.— "ಆ ಮನುಷ್ಯನು ಹೀಗೆ ಅಥವಾ ಹಾಗೆ ಹೇಳುತ್ತಿರುವದರಿಂದ ಅವನು ಹೀಗೆ ಹೀಗೆ ಆಲೋಚಿಸುತ್ತಿರಲಿಕ್ಕೆಬೇಕು; ಅಥವಾ ಆತನ ಸ್ವಭಾವವು ಇಂಥಿಂಥದಿರಲಿಕ್ಕೆ ಬೇಕು. ಆತನ ಕೃತಿಗಳೂ ಅದನ್ನೇ ತೋರಿಸುತ್ತವೆ; ಅವನ ಮುಖಲಕ್ಷಣವೂ ಇದನ್ನೇ ಸೂಚಿಸುತ್ತಲಿದೆ." ಹೀಗೆ ಈ ಭೌತಿಕ ವಿಚಾರಿಯು ತರ್ಕಿಸುತ್ತ ನಡೆಯುವನು.

ಇವನಿಗೆ ಅಗತ್ಯವಿದ್ದಷ್ಟು ಸಂಗತಿಗಳು ಲಭಿಸದಿದ್ದರೆ ತನ್ನ ಕಲ್ಪನೆಯಿಂದಾಗಲಿ, ಸ್ಮೃತಿಯಿಂದಾಗಲಿ ಅವುಗಳನ್ನೆಲ್ಲ ಪೂರೈಸಿಕೊಳ್ಳುವನು. ಬೇರೆ ಜನರ ಹಾಗೂ ತನ್ನ ಸ್ವಂತದ ಅನುಭವಗಳು,

---

* ಭಾವ—ದಿವ್ಯಾನುಭೂತಿ; ಭಾವನೆ—ಚಿತ್ತದ ಉದ್ರೇಕ.

ಪುಸ್ತಕಗಳಲ್ಲಿ ಮಾನವಸ್ವಭಾವದ ಬಗೆಗೆ ಓದಿದ ಸಂಗತಿಗಳು ಮತ್ತು ಅನ್ಯರ ಬಾಯಿಯಿಂದ ಕೇಳಿದ ಮಾತುಗಳು ಇವೆಲ್ಲವುಗಳ ನೆರವಿನಿಂದ ಕಡಿಮೆಬಿದ್ದದ್ದನ್ನೆಲ್ಲ ಹೀಗೆ ತುಂಬಿಕೊಳ್ಳುವನು.

ಈತನು ಲಕ್ಷಿಸುವನು, ನಿರೀಕ್ಷಿಸುವನು, ತಾರತಮ್ಯ ಮಾಡುವನು, ತುಲನೆ ಮಾಡುವನು, ಅನುಮಾನಿಸುವನು, ಉಪಮಿಸುವನು, ಕಲ್ಪಿಸುವನು, ಸ್ಮರಿಸುವನು — ಇವೆಲ್ಲವುಗಳ ಸಮವೇತ ಫಲಿತಾಂಶಕ್ಕೆ ತರ್ಕವೆಂದೂ, ಜ್ಞಾನವೆಂದೂ, ಸಿದ್ಧಾಂತವೆಂದೂ ಅನ್ನುವನು. ವಾಸ್ತವಿಕವೆಂದರೆ ಈತನು ಒಂದು ರೀತಿಯಿಂದ ಸಂಭವನೀಯತೆಗೆ ಮಾತ್ರ ಬಂದನು. ಆದರೆ ಈತನು ತನ್ನ ಕಣ್ಣು, ಕಿವಿ, ಮೂಗು, ತ್ವಚೆ, ನಾಲಿಗೆ ಮೊದಲಾದವುಗಳ ನಿರೀಕ್ಷಣದ ಹೊರತು ತನ್ನ ಫಲಿತಾಂಶಗಳೂ ವಿಚಾರಗಳೂ, ನಿಶ್ಚಯವಾಗಿ ನಿರ್ದುಷ್ಟವಾಗಿರಲೇ ಬೇಕೆಂದು ನಂಬುವುದು ಅಶಕ್ಯವಾಗಿದೆ. ಇದಿರಲಿ. ಇದಕ್ಕಿಂತ ಮೇಲಿನದಾವುದಿದ್ದರೂ ಭೌತಿಕನಿಗೆ ಅದರಲ್ಲಿ ಅಶ್ರದ್ಧೆಯೆ. ತನ್ನ ಇಂದ್ರಿಯಗಳಿಂದ ನಿರೀಕ್ಷಿಸಲಾಗುವ ಹಾಗೂ ಇಂದ್ರಿಯ ಪ್ರತೀತಿಗೆ ಸರಿಹೊಂದುವ ವಿಷಯಗಳ ಹೊರತು ಇನ್ನಾವುದೂ ಇವನಿಗೆ ಸತ್ಯವಲ್ಲ.

ಈಗ ಯೋಗಿಯು ಏನೇನು ಮಾಡುವನು? ಅವನು ಬರಿ ಅಜ್ಞ ವಸ್ತುವಿನೊಡನೆ ತನ್ನ ಸಂಬಂಧವನ್ನು ಸ್ಥಾಪಿಸಿಬಿಡುವನು, ಇಷ್ಟೆ; ಅದರ ಆಕಾರ, ಗುಣ ಮತ್ತು ನಾಮ ಇವುಗಳೊಡನೆ ಅಲ್ಲ, ಆದರೆ ಕೇವಲ ಅದರೊಡನೆ ಮಾತ್ರ. ಅವನು ಎಂದೂ ಅದರ ಆಕಾರವನ್ನು ನೋಡಿರಲಿಕ್ಕೂ ಇಲ್ಲ; ಹೆಸರನ್ನು ಕೇಳಿರಲಿಕ್ಕೂ ಇಲ್ಲ, ಗುಣವನ್ನು ಕಂಡುಂಡಿರಲಿಕ್ಕೂ ಇಲ್ಲ; ಆದರೂ ಅದರ ಅರಿವು ಅವನಿಗಿದೆ. ಯಾಕೆಂದರೆ ಅದು ಕೇವಲ ವಸ್ತುವೇ ಮಾತ್ರವಿದೆ; ಮತ್ತು ಅದು ಅವನೊಳಗೇ ಇದೆ. ಮಾನವನ (ಸಚ್ಚಿದಾನಂದಾತ್ಮಕ) ಮಹಾಕಾರಣದಲ್ಲಿ ಅದು ಅವನೊಂದಿಗೆ ಏಕೀಭೂತವಾಗಿರುತ್ತದೆ. ಅಲ್ಲಿ ಸಕಲವೂ ಆತ್ಮನಿಗೆ ಕೂಡಿಕೊಂಡಿರುತ್ತದೆ; ಬರಿ ಅದರೊಡನೆ ಸಂಬಂಧ ಬಂದ ಮಾತ್ರಕ್ಕೆ

ಅದರ ವಿಷಯದಲ್ಲಿ ಒಂದೂ ಬಿಡದೆ ಎಲ್ಲವನ್ನೂ ಅರಿಯಲಿಕ್ಕೆ ಸಾಧ್ಯ ವಿರುವಷ್ಟು ಸಂಪೂರ್ಣವಾಗಿ ಅದು ಆತ್ಮನೊಂದಿಗೆ ಏಕೀಭವಿಸಿರುತ್ತದೆ.

ಸ್ವಲ್ಪಜನ ಯೋಗಿಗಳು ಆ ಅವಸ್ಥೆಗೆ ಮುಟ್ಟುತ್ತಾರೆ. ಆದರೆ ಅದೇ ಪ್ರಕಾರವಾಗಿ ಕಾರಣದಲ್ಲಿ ಕೂಡ ವಸ್ತುವಿನ ವಾಸ್ತವ ಸ್ವರೂಪ ದೊಡನೆ ನಮ್ಮ ಸಂಬಂಧವನ್ನು ಸ್ಥಾಪಿಸಿ 'ಭಾವ'ದ ಮುಖಾಂತರ ವಾಗಿ ನಾವು ಅದರ ಜ್ಞಾನವನ್ನು ಮಾಡಿಕೊಳ್ಳಬಹುದು.

ನಾವು ಅಭ್ಯಾಸಿಸಲಿರುವ ಮನುಷ್ಯನ ಅಥವಾ ವಸ್ತುವಿನ ಅಂತ ರಾತ್ಮನೊಂದಿಗೆ (Soul) ನಮ್ಮ ಅಂತರಾತ್ಮನ ಸಂಬಂಧವನ್ನು ಸ್ಥಾಪಿ ಸುವದರಿಂದ ನಮ್ಮೊಳಗಿನ **ಪ್ರಾಜ್ಞನು** ಅವನೊಳಗಿನ ಅಥವಾ ಅದ ರೊಳಗಿನ **ಪ್ರಾಜ್ಞನೊ**ಡನೆ ಒಂದಾಗುತ್ತಾನೆ. ಇದನ್ನು ನಾವು ಹೇಗೆ ಸಾಧಿಸುವೆವು? ನಾವು ಶಾಂತರಾಗಿ ವ್ಯಕ್ತಿಯನ್ನಾಗಲಿ ವಸ್ತು ವನ್ನಾಗಲಿ ನಮ್ಮ ಬುದ್ಧಿಯು ಸಮ್ಮುಖಗೊಳಿಸಿದರಾಯಿತು. ನಮ್ಮ ಬುದ್ಧಿಯು ಸರ್ವಾಂಗಸುಂದರವಾಗಿ ಶುದ್ಧಗೊಳಿಸಲ್ಪಟ್ಟಿದ್ದರೆ ಹಾಗೂ ನಮ್ಮ ಮನವು ಶಾಂತವಿದ್ದರೆ ಆಗ ನಮಗೆ ಅವನ (ಅಥವಾ ಅದರ) ಸತ್ಯಜ್ಞಾನವು ಲಭಿಸುವದು. ಅದು ನಮಗೆ 'ಭಾವ' ಮುಖದಿಂದ ಅಥವಾ ಆತ್ಮಿಕ ಪ್ರತೀತಿಯಿಂದ ಪ್ರಾಪ್ತವಾಗುವದು.

ಆಮೇಲೆ ನಾವು ಹೀಗೆ ಲಭಿಸಿದುದನ್ನು ಸ್ಪಷ್ಟವೂ ಸಮಂಜ ಸವೂ ಆಗುವಂತೆ ಮಾಡಬೇಕಾಗುವದು. ಹಾಗಾಗಬೇಕಾದರೆ ನಾವು ಅದನ್ನು ಬೌದ್ಧಿಕವಾಗಿ ನಮ್ಮ ಬುದ್ಧಿಗೆ ತೋರಿಸಲಿಕ್ಕೆಬೇಕು. ಅರ್ಥಾತ್ ಅದರ ಬಗೆಗೆ ನಾವು ವಿಚಾರ ನಡಿಸಬೇಕು. ನಾನೀಗ ನಿಮ್ಮ ಮುಂದೆ ಮಂಡಿಸಲಿರುವ ಕಲ್ಪನೆಗಳು ನನ್ನೊಳಗೇ ನಿರ್ದೇಶ ಪಡಿಸಲಿಕ್ಕಾಗದಂಥ ಜ್ಞಾನಸ್ವರೂಪದಲ್ಲಿ ಇವೆಯಷ್ಟೆ? ಅವು ತಮ್ಮನ್ನು ವಾಕ್‌ರೂಪದಿಂದ ಆಕಾರಕ್ಕೆ ತರುವವು, ಮತ್ತು ಖಂಡಿತವಾದ ಅರ್ಥ ವನ್ನು ಧಾರಣ ಮಾಡುವವು. ವಿಚಾರವೆಂದರೆ ಇದೇ.

ಬಹುಜನರು ಖಂಡಲಮಂಡಲವಾಗಿ ವಿಚಾರಮಾಡುತ್ತಾರೆ. ಅಸಂಪೂರ್ಣ ವಾಕ್ ಮತ್ತು ಆಂಶಿಕ ಅರ್ಥ ಇವುಗಳ ರೂಪದಲ್ಲಿ

ಅವರು ವಿಷಯವನ್ನು ಅರ್ಧಮರ್ಧವಾಗಿ ಹೊರಪಡಿಸುವರು. ಯೋಗಿಯು ಹಾಗೆ ಮಾಡಕೂಡದು. ನಿಚ್ಚಳವಾದ ಹಾಗು ಪರಿಪೂರ್ಣವಾದ ವಾಕ್ಯಗಳಿಂದ ಅವನ ವಿಚಾರಗಳು ತಮ್ಮನ್ನು ತಾವು ಪ್ರಕಟಗೊಳಿಸಬೇಕು. ಆತನು ವಸ್ತುವನ್ನು ವಿಚಾರದ ಸಹಾಯವಿಲ್ಲದೆ ಅರಿಯಬಹುದಾದರೂ ವಿಚಾರಮಾಡುವುದಾದರೆ ಆಗ ಅವನು ಸ್ಪಷ್ಟವಾಗಿ ಪರಿಪೂರ್ಣವಾಗಿ ವಿಚಾರಮಾಡಲುಬೇಕು.

ಅವಶ್ಯಕತೆಯಿದ್ದಾಗ ಯೋಗಿಯು ತರ್ಕವನ್ನೂ ಕೂಡ ಮಾಡುತ್ತಾನೆ; ಆದರೆ ಭೌತಿಕ ಶಾಸ್ತ್ರದ ಮನುಷ್ಯನಂತೆ ಅಲ್ಲ. ಕಂಡ ಸತ್ಯವನ್ನು ವಿಚಾರಕ್ಕೆ ಅನುವಾದಿಸುವ ಸಾಮರ್ಥ್ಯವುಳ್ಳ ದಿವ್ಯದರ್ಶನ ಶಕ್ತಿಯು (Prophetic power) ಸಹಾಯದಿಂದ ಅವನಿಗೆ ವಿಷಯ ದರ್ಶನವಾಗುವದಷ್ಟೆ? ದಿವ್ಯ**ಪ್ರತ್ಯಕ್ಷವು** ಅವನಿಗೆ ಅರ್ಥವನ್ನು ಕೊಡುವದು, **ಪ್ರತಿಭೆಯು** (Inspiration) ವಾಕ್ಯವನ್ನು ಕೊಡುವದು, **ಅಂತರ್ನಿದೇಶವು** (Intution) ಆದರ ಬಗೆಗೆ ಅವನಿಗೆ ಸತ್ಯಸಿದ್ಧಾಂತವನ್ನು ಮಾಡಿಕೊಡುವದು, **ವಿವೇಕವು** (Discrimination) ಪ್ರಮಾದವಾಗದಂತೆ ರಕ್ಷಿಸುವದು. ಈ ನಾಲ್ಕು ಸಹಜಕ್ರಿಯೆಗಳಿಂದ ಪರಿಪೂರ್ಣ ರೀತಿಯಲ್ಲಿ ವಿಚಾರಿತವಾದ ಸತ್ಯವನ್ನು ನೋಡಿರಿ. ಆತನು ಪ್ರಸ್ತಾಪಿಸಲಿಕ್ಕೆ ನಿಂತರೆ ಅಂತರ್ನಿರ್ದೇಶವೇ ಅವನಿಗೆ ಉಚಿತ ಕೋಟಿಕ್ರಮವನ್ನು ಒದಗಿಸಿಕೊಡುವದು. ಅವನು ನ್ಯಾಯ ಶಾಸ್ತ್ರಜ್ಞನಂತೆ ಒಂದು ಅನುಮಾನದಿಂದ ಇನ್ನೊಂದು ಅನುಮಾನಕ್ಕೆ ಕಷ್ಟದಿಂದ ತೊಳಲಾಡಬೇಕಾಗಿಲ್ಲ.

ಕೊನೆಗೆ ಆತನು ತನ್ನ ಜ್ಞಾನವನ್ನು ಬಾಹ್ಯಜಗತ್ತಿನ ಘಟನೆಗಳಿಂದ ಪ್ರಮಾಣೀಕರಿಸುವನು. ಆತನು (ಪರೀಕ್ಷಿಸಬೇಕಾಗಿರುವ) ಮನುಷ್ಯನನ್ನು ಕೇವಲ ನೋಡಿದೊಡನೆ ಅಥವಾ ಅವನ ಬಗೆಗೆ ಮನದಲ್ಲಿ ಕಲ್ಪನೆ ಬಂದೊಡನೆ ಅವನಿಗೆ ಸಂಬಂಧಿಸಿದ ಸತ್ಯವನ್ನು ಆತನು ಕಂಡುಕೊಂಡಿದ್ದಾನೆ. ಆಮೇಲೆ ನಿಚ್ಚಳವಾಗಿ ಅದನ್ನು ವಿಚಾರಕ್ಕೆ

ಇಳಿಸಿದ್ದಾನೆ. ಈಗ ತನ್ನ ಕಲ್ಪನೆಯನ್ನು ಆ ಮನುಷ್ಯನ ಕೃತಿಗಳೊಡನೆಯೂ ಮಾತುಕಥೆಗಳೊಡನೆಯೂ ತುಲನೆ ಮಾಡುತ್ತಾನೆ. ಆದರೆ ತನ್ನ ಸತ್ಯವನ್ನು ಪರೀಕ್ಷಿಸುವುದಕ್ಕಲ್ಲ; ಯಾಕೆಂದರೆ ಮಾನವನ ಚೇಷ್ಟೆಗಳೂ ಮಾತುಕಥೆಗಳೂ ಇಂಗಿತವನ್ನು ಆಂಶಿಕವಾಗಿ ಮಾತ್ರ ಪ್ರಕಟಗೊಳಿಸುವದರಿಂದ ಅಭ್ಯಾಸಕನನ್ನು ಅವು ಅಡ್ಡದಾರಿಗೆ ಒಯ್ಯುವವೆಂಬುದು ಆತನಿಗೆ ಗೊತ್ತು. ಆದರೆ ಕಾರಣದಲ್ಲಿ ತಾನು ಕಂಡ ಸತ್ಯವು ಸ್ಥೂಲದಲ್ಲಿ ಎಷ್ಟರಮಟ್ಟಿಗೆ ಇಳಿದಿದೆಯೆಂಬುದನ್ನು ನೋಡುವುದಕ್ಕೆ ಮಾತ್ರವೇ ಆತನು ಅದನ್ನು ನಡಿಸುವನು. ತನಗೆ ಯೋಗದಿಂದ ಲಭಿಸಿದ ಆಳವಾದ ಸತ್ಯದೊಡನೆ ಆ ಮನುಷ್ಯನ ಬಾಹ್ಯಜೀವನವು ಎಷ್ಟು ಸರಿಹೊಂದುವದೋ ಅಷ್ಟು ಮಾತ್ರವನ್ನೆ ಯೋಗಿಯು ನಂಬುವನು.

ನೀವು (ಮೇಲ್ಕಾಣಿಸಿದ ಎರಡು ಬಗೆಯ ಜ್ಞಾನಗಳಲ್ಲಿ) ಅಪಾರವಾದ ತಾರತಮ್ಯವನ್ನು ಕಾಣುವಿರಷ್ಟೇ? ನಿಮಗಿರುವ ಬಿಗಿಯೆಂದರೆ ಬಾಹ್ಯೇಂದ್ರಿಯಗಳ ಹಾಗೂ ತರ್ಕಬುದ್ಧಿಯ ಬಳಿಕೆಯು ನಿಮಗೆ ರೂಢವಾಗಿಬಿಟ್ಟಿರುವದರಿಂದ ಉಚ್ಚತರ ಇಂದ್ರಿಯಗಳು ಅವುಗಳ ಆಳಿಕೆಯಲ್ಲಿ ಸಿಕ್ಕುಬಿದ್ದು ಸಂಪೂರ್ಣವಾಗಿ ಲುಪ್ತವಾಗಿಯೇಬಿಟ್ಟಿವೆ. ಆದುದರಿಂದಲೇ ಈ ಉಚ್ಚತರ ಇಂದ್ರಿಯಗಳನ್ನು ವ್ಯವಹರಿಸುವದು ನಿಮಗೆ ಬಿಗಿಯಾಗಿ ತೋರುತ್ತದೆ.

ಮೊದಲಿನಿಂದಲೇ ನೀವು **ಭಾವ ಅಥವಾ ಆತ್ಮಜ್ಞಾನ**ದಿಂದ ಹೊರಟಿದ್ದರೆ ಎಷ್ಟು ಸುಲಭವಾಗುತ್ತಿದ್ದಿತು! ಆಯಿತು, ಅದು ಈಗಲೂ ಘಟಿಸುವದು. ಆದರೆ ಮೊದಲಿಗೆ ನೀವು ನಿಮ್ಮ ಬುದ್ಧಿಯನ್ನು ಅಥವಾ ಮನದ ಇಂದ್ರಿಯಗಳನ್ನು ನಿವಾರಿಸಿ ಆದರಿಂದ ಉಚ್ಚತರ ಇಂದ್ರಿಯಗಳ ಕ್ರಿಯಾಶಕ್ತಿಯನ್ನು ಜಾಗೃತಗೊಳಿಸಿರಿ. ಅವು ನಿಮಗಾಗಿ ನೋಡುವವು, ಕೇಳುವವು; ಹಾಗೆಯೆ ವಿಚಾರವನ್ನು ಸಹ ಮಾಡುವವು.

ಆದ್ದರಿಂದ ಮೊದಲಿಗೆ ನಿಮ್ಮೊಳಗಿನ ಸಂಕರಗಳನ್ನು ಸರಿಪಡಿಸಿರಿ. ನಿಮಗೆ ನಾನು ಹಿಂದೆ ಹೇಳಿದುದನ್ನು ಸೋಪಪತ್ತಿಕ ತಿಳಿದುಕೊಳ್ಳಿರಿ.

ಆದರಂತೆ ಇನ್ನುಮುಂದೆ ಹೇಳಲಿರುವುದನ್ನು ಸಹ. ಆಮೇಲೆ ಸಂಕಲ್ಪ ಶಕ್ತಿಯನ್ನು ಪ್ರಯೋಗಿಸಿ ತರ್ಕ, ಕಲ್ಪನೆ, ಸ್ಮೃತಿ, ವಿಚಾರ ಮತ್ತು ಇಂದ್ರಿಯಗ್ರಹಣ ಮೊದಲಾದವುಗಳನ್ನು ಸಾಕಾಗುವಷ್ಟು ನಿಶ್ಚಲ ಸ್ಥಿತಿಗೆ ತನ್ನಿರಿ. ಆದರಿಂದ ಉಚ್ಚತರ ಬುದ್ಧಿಯು ಇವೆಲ್ಲ ನಿಮ್ಮವೃತ್ತಿ ಗಳಿಗಿಂತ ತಾನು ಭಿನ್ನವಾಗಿದ್ದೇನೆಂದು ಅರಿತುಕೊಳ್ಳುವದು. ಉಚ್ಚ ಬುದ್ಧಿಯು ತನ್ನನ್ನು ಬೇರ್ಪಡಿಸಿಕೊಂಡು ಹೆಚ್ಚುಹೆಚ್ಚಾಗಿ ಕ್ರಿಯಾಶೀಲ ವಾದರೆ ಕೂಡಲೆ ನಿಮ್ಮಬುದ್ಧಿಯು ಎದೆಗೆಟ್ಟು, ಅಲ್ಪ ಅಲ್ಪವಾಗಿ ಚಲಿಸುತ್ತ, ಕೊನೆಗೆ ನಿಮಗೆ ವಿಘ್ನವನ್ನೇ ಮಾಡುವದಿಲ್ಲ.

ಆದುದರಿಂದ ಮೊದಲಿಗೆ ಸಂಕಲ್ಪಿಸಿರಿ. ಬಳಿಕ ಸಂಕಲ್ಪ ಅಥವಾ ಶಕ್ತಿಯ ಮೂಲಕ ಜ್ಞಾನ. **ಮೊದಲು ಕಾಲಿ, ಅಲ್ಲಿಂದ ಸೂರ್ಯ.** ಆಧಾರದ ಇನ್ನುಳಿದ ಅಂಶಗಳ ಬಗೆಗೆ ಹೇಳಿ, ಮುಗಿಸುವದರೊಳಗಾಗಿ ವಿವಿಧ ಇಂದ್ರಿಯಗಳನ್ನು ಕುರಿತು ವಿಶದ ಪಡಿಸುವೆನು,



# ೫ ಮನ

ಪ್ರಕರಣೋಪಕ್ರಮಣಿಕೆ:—

"ಒಂದೇ ಕಾಲಕ್ಕೆ ಜ್ಞಾನವನ್ನು ಎಬ್ಬಿಸುದಕ್ಕೂ, ಮನವನ್ನು ಶಾಂತಗೊಳಿಸುವುದಕ್ಕೂ ಸಂಕಲ್ಪಶಕ್ತಿಯನ್ನು ಪ್ರಯೋಗಿಸುವುದು ಸರ್ವೋತ್ತಮವಾದ ಮಾರ್ಗವಾಗಿದೆ"ಯೆಂದು ಗುರು ಅರವಿಂದರ ಅಭಿಪ್ರಾಯ. ಅರ್ಥಾತ್ ಮೊಟ್ಟಮೊದಲಿಗೆ ಶಕ್ತಿ, ಅನಂತರ ಏಕಕಾಲಕ್ಕೆ ಜ್ಞಾನ ಮತ್ತು ಶಾಂತಿ. ಪೂರ್ಣಯೋಗದಲ್ಲಿ ಶಾಂತಿಗೂ ಶಕ್ತಿಜ್ಞಾನಗಳಷ್ಟೇ ಪ್ರಾಮುಖ್ಯತೆಯಿದೆ. ಹೀಗೆಂತಲೇ ಗುರು ಅರವಿಂದರು ಒಂದೆಡೆಯಲ್ಲಿ—"ಮನವು ವಿರಾಮರಹಿತ ಸ್ಥಿತಿಯಲ್ಲಿರುವ ವರೆಗೆ ಯೋಗದ ಪ್ರತಿಷ್ಠಾಪನೆಯು ಅಶಕ್ಯವಾಗಿದೆ. ಮೊದಲನೆಯ ಅಗತ್ಯವೆಂದರೆ ಮನದ ಶಾಂತದಶೆಯು. ಆದರೆ ವ್ಯಕ್ತಿಭಾನವನ್ನು ಲಯಗೊಳಿಸಬೇಕಾದುದೇನೂ ಯೋಗದ ಉದ್ದೇಶವಲ್ಲ; ಪ್ರಥಮೋದ್ದೇಶವೆಂದರೆ ಅದನ್ನು ಉಚ್ಚತರ ಆತ್ಮಿಕಭಾನದ ಇದಿರಿಗೆ ತೆರೆದು ಇಡುವುದು. ಈ ಕಾರ್ಯಕ್ಕೆ ಮನದ ಶಾಂತಾವಸ್ಥೆಯು ಮೊದಲನೆಯ ಅಗತ್ಯವು...........ಅದಿಲ್ಲದಿದ್ದರೆ ನಿಮಗೆ

ಅನುಭವಗಳು ಬರಬಹುದಾದರೂ ಒಂದೂ ಸ್ಥಾಯಿ ಯಾಗಿ ಉಳಿಯುವದಿಲ್ಲ. ಸ್ತಬ್ಧ ಮನವೇ ಸತ್ಯವಾದ ಭಾನದ ನಿರ್ಮಾಣಕ್ಕೆ ನೆಲೆಯು........ಶಾಂತ ಮನ ವೆಂದರೆ ಮಾನಸಿಕ ಚಲನವಲನಗಳೇನೂ ಇರಲೇ ಬಾರದೆಂತಲ್ಲ. ಅವು ಹೊರಗಡೆಗೆ ಮಾತ್ರ ಅಲೆಯು ತ್ತಿರಬೇಕು; ಒಳಗಡೆಗೆ ನಿಮ್ಮ ಸತ್ಯವಾದ ಸತ್ತೆಯು ಅವುಗಳಿಂದ ತಾನು ಅಲಿಪ್ತವಾಗಿಗುವುದನ್ನು ಅನುಭವಿ ಸುತ್ತಿರಬೇಕು" ಎಂದು ವಿವರಿಸಿದ್ದಾರೆ. ಇಷ್ಟಕ್ಕೇ ತೀರಲಿಲ್ಲ. ನಾಲಿಗೆಯ ಸ್ವಾದ ಕೆಟ್ಟಿರುವಾಗ ಎಷ್ಟು ಸಾರೆ ಏನು ತಿಂದರೂ ತೃಪ್ತಿಯಾಗಲಾರದ್ದರಿಂದ ಇನ್ನೂ ತಿನ್ನುವ ಆಶೆಯಲ್ಲಿಯೇ ಜೀವವು ಒದ್ದಾಡುತ್ತಿರು ವಂತೆ ಮಾನವನ ಪಂಚೇಂದ್ರಿಯ ಶಕ್ತಿಯು ಆತ್ಯಂತಿಕ ಹ್ರಾಸದ ಮೂಲಕ ಅತ್ಯಲ್ಪವಾಗಿ ಲಭಿಸುವ ವಿಷಯ ಜ್ಞಾನವು ಮನದ ತೃಪ್ತಿಗೆ ಸಾಕಾಗದ್ದರಿಂದ ಅದು ಒಂದು ನಿಮಿಷ ಕೂಡ ಒಂದು ವಿಷಯದ ಮೇಲೆ ನಿಲ್ಲದೆ ಹುಚ್ಚು ಹಿಡಿದವರಂತೆ ಒಂದೇಸವನೆ ಕಡು ವೇಗದಿಂದ ವಿಷಯದಿಂದ ವಿಷಯಾಂತರಕ್ಕೆ ಹಾರಾಡು ತ್ತಿರುತ್ತದೆ. ಮನದ ಅವಿರಾಮ ಸ್ಥಿತಿಯೆಂದರೆ ಇದೇ. ಮನಶ್ಚಾಂಚಲ್ಯದ ನಿಜವಾದ ಕಾರಣವು ಇಲ್ಲಿ ಇದೆ. ಆದುದರಿಂದ ಮೊಂಡಗಟ್ಟಿರುವ ಪಂಚೇಂದ್ರಿಯ ಶಕ್ತಿ ಯನ್ನು ಅತ್ಯಂತವಾಗಿ ಹರಿತಗೊಳಿಸಿದರೆ ಆಗ—" ಕಣ್ಣು

ಈಗ ಹೇಗೆ ದರ್ಶನ ಮಾಡುವದೋ ಆಮೇಲೆ ಹಾಗೆ ದರ್ಶನ ಮಾಡುವದಿಲ್ಲ. ಒಂದು ಅಖಂಡದ ಅಸಂಖ್ಯ ಗುಣರೂಪಗಳ ಹಾಗೂ ಶಕ್ತಿ ವಿಶೇಷಗಳ ಮತ್ತು ಗುಣಧರ್ಮಗಳದೊಂದು ರಂಗಮಂಟಪವೇ ಅದಕ್ಕೆ ಗೋಚರಿಸುವದು. ಕಿವಿಯು ಒಂದು ಶಾಬ್ದಿಕ ಸರ್ವ ಸಂಪೂರ್ಣತೆಯನ್ನು *( Totality of sound )* ಅನುಭವಿಸುವದು. ಸಮಸ್ತ ಇಂದ್ರಿಯಗಳಲ್ಲಿ ಇಂಥದೊಂದು ತೀಕ್ಷ್ಣತೆಯೂ ಅಂತಃಪ್ರವೇಶವೂ ಸಮಗ್ರತೆಯೂ *( Intensity, innerness, totality )* ಪ್ರತಿಬಿಂಬಿಸುವದು. ಮಾನವನ ಪಂಚೇಂದ್ರಿಯ ಶಕ್ತಿಗೆ ಇಂಥದೊಂದು ಪ್ರಖರತೆಯು ಬರುವುದರ ವಿಷಯದಲ್ಲಿ ಎಳ್ಳಷ್ಟು ಸಂದೇಹವಿಲ್ಲ" ಎಂದು ಗುರು ಅರವಿಂದರೇ ಬೇರೊಂದೆಡೆಯಲ್ಲಿ ಹೇಳಿದ್ದಾರೆ. ಸಂಜ್ಞಾನವೆಂದೂ ಪ್ರಾಕಾಮ್ಯವೆಂದೂ ಪುರಾತನರು ಇದಕ್ಕೇ ಹೆಸರಿಟ್ಟಿದ್ದಾರೆ. ಈ ಶಕ್ತಿಯು ಅರಳಿದರೆ ಆಗ ಪಂಚೇಂದ್ರಿಯಾಧಿಪತಿಯಾದ ಮನವು ಪೂರ್ಣತೃಪ್ತಿಯ ಮೂಲಕ ವಿರಾಮ ದಶಾಪ್ರಾಪ್ತವಾಗುವದು. ಯೌಗಿಕಕ್ರಿಯೆಗಳಿಂದ ಮನವನ್ನು ಬಗ್ಗುಬಡಿದು ಗಳಿಸುವ ಶೂನ್ಯಾಕಾರದ ಶಾಂತಿಗೂ ಪ್ರಾಕಾಮ್ಯ ಶಕ್ತಿಯ ವಿಕಾಸದಿಂದ ಲಭಿಸುವ ಮಧುರ ವಿರಾಮಕ್ಕೂ ಮಹದಂತರವಿದೆ. "ಸಚ್ಚಿದಾನಂದ"ಕ್ಕೆ ಪ್ರಾಧಾನ್ಯವಿರುವ ಯೋಗದಲ್ಲಿ ಅಂಥ ಶೂನ್ಯಾಕಾರದ

ಶಾಂತಿಗೆ ಪ್ರಾಮುಖ್ಯತೆಯಿರುವದು. ಆದರೆ " ವಿಜ್ಞಾನ "ಕ್ಕೆ ಪ್ರಾಧಾನ್ಯವಿರುವ ಪೂರ್ಣಯೋಗದಲ್ಲಿ ಹೀಗೆ ಸಮಗ್ರತಾ ಯುಕ್ತವಾದ ಮಾನಸವಿರಾಮಕ್ಕೆ ಪ್ರಾಮುಖ್ಯತೆಯಿರುವದು. ನಮಗೆ ಬೇಕಾದ ಶಾಂತಿಯೆಂಬುದು ಇದೇ. ಇಲ್ಲಿ ಇನ್ನೊಂದು ಮಹತ್ವದ ಮಾತನ್ನು ವಿಶದಗೊಳಿಸದಿದ್ದರೆ ಸಾಗುವಂತಿಲ್ಲ. ಅದು- ಬುದ್ಧಿ ಮತ್ತು ಮನ ಇವುಗಳಲ್ಲಿ ಪ್ರಭೇದವೇನೆಂಬುದೇ. ನಿಜವಾಗಿ ನೋಡಿದರೆ ಇವು ಒಂದರವೇ ಎರಡು ಅವಸ್ಥೆಗಳು. ಇಂದ್ರಿಯಾತೀತ ಬುದ್ಧಿ ಮತ್ತು ಇಂದ್ರಿಯಾಧೀನಬುದ್ಧಿ ಎಂದು ಕ್ರಮವಾಗಿ ಅವುಗಳಿಗೇ ಅನ್ನಬಹುದು. ಇಂದ್ರಿಯಗಳಿಗೆ ನಿಲುಕಲಾರದ್ದು ಬುದ್ಧಿಗೆ ಗ್ರಾಹ್ಯವಾಗುವದೆಂದು ಪುರಾತನ ಶಾಸ್ತ್ರಜ್ಞರ ಅಭಿಪ್ರಾಯವೂ ಇದೆ. " ಬುದ್ಧಿಗ್ರಾಹ್ಯಂ ಅತೀಂದ್ರಿಯಂ " ( ಗೀತೆ ). ಸಚ್ಚಿದಾನಂದದಿಂದ ಮೊದಲು ಮಾಡಿದ ಆತ್ಮನ ಪ್ರಗತಿಕ್ರಮದಲ್ಲಿ ಆತನಿಗೆ ಇಂದ್ರಿಯಗಳ ಅಗತ್ಯವು ಕೇವಲ ಭೌತಿಕಕ್ಕೆ ಬಂದ ಬಳಿಕ ಉಂಟಾಗುತ್ತದೆ. ಆದುದರಿಂದ ಇಂದ್ರಿಯಾಧಿಷ್ಠಿತವಾದ ಮನವು ಬುದ್ಧಿಯ ಭೌತಿಕರೂಪವು. ಆದುದರಿಂದ ಮನವೆಂಬುದಕ್ಕೆ ಭೌತಿಕಬುದ್ಧಿಯೆಂದು ಅನ್ನಬಹುದು. ಗುರು ಅರವಿಂದರು ಇದೇ ಅರ್ಥವನ್ನು ಸ್ವೀಕರಿಸುತ್ತಾರೆ. ಅಂತೇ ಇವೆರಡರ ಶುದ್ಧಿಯೂ ಏಕಕಾಲಕ್ಕೆ ಆಗಬೇಕಾದುದರ

ಅಗತ್ಯವನ್ನು ಅವರು ಪ್ರತಿಪಾದಿಸುತ್ತಾರೆ. ಪಂಚೇಂದ್ರಿಯಗಳ ಕಾರ್ಯಕ್ಕೆ ಸದಾ ಸಾಕ್ಷೀಭೂತವಾಗಿ ಇರಬೇಕಾದದ್ದಿಷ್ಟೇ ಮನದ ಕೆಲಸವೆಂದು ಭಾವಿಸಿದರೆ ಅದು ತಪ್ಪು. ಪಂಚೇಂದ್ರಿಯಸಂಸ್ಕಾರಗಳಿಗಿಷ್ಟೇ ಸತ್ಯ, ಉಳಿದದ್ದೆಲ್ಲ ಮಿಥ್ಯ- ಎಂದು ಗ್ರಹಿಸುವ ಜಡಜ್ಞಾನವೂ ಕೂಡ ಈ ಮನದ್ದೇ. ಸರ್ವಸಾಧಾರಣರಲ್ಲಿ ಬುದ್ಧಿಯೆಂದು ತೋರುತ್ತಿರುವುದೆಲ್ಲಾ ಇಂಥ ಈ ಮನವೇ ಆಗಿದೆ. ಇಲ್ಲದ್ದೊಂದು ಏನೋ ಇರಲಿಕ್ಕೆಬೇಕೆಂಬ ಗ್ರಹಿಕೆಯು ಹೇಗೋ ಉಂಟಾಗಿ ಅದರ ಸಲುವಾಗಿ ಹುಚ್ಚುಹಿಡಿದಿದೆಯೆಂದೆನ್ನುವಷ್ಟು ಮನದ ಏಕಾಗ್ರತೆಯೂ ಪರಿಶ್ರಮವೂ ಅಖಂಡವಾದಾಗ ಭೌತಿಕಶಾಸ್ತ್ರಜ್ಞರಿಗೆ ಬಹುಕಾಲಕ್ಕೆ ಲಭಿಸುವ ತಥ್ಯವು ನಿಜವಾಗಿ ಬೌದ್ಧಿಕವಾಗಿರುತ್ತದೆ; ಅದು ಮನದ್ದಲ್ಲ. "ಭೂಮಿ ಚಲಿಸುತ್ತಿದೆ ಮತ್ತು ಅದು ದುಂಡಗಿದೆ" ಎಂಬ ಸಿದ್ಧಾಂತವು ಈ ಮಾತಿಗೆ ಶ್ರೇಷ್ಠವಾದ ಉದಾಹರಣೆಯಾಗಿದೆ. ಮಾನವನ ಇಂದ್ರಿಯಗಳಿಗೆ ಇದು ಎಂದಾದರೂ ಪ್ರತ್ಯಕ್ಷವಾದ ವಿಷಯವೇ? ಅಲ್ಲವೇ ಅಲ್ಲ. ಅಂತಲೇ ಬುದ್ಧಿಗ್ರಾಹ್ಯಂ ಅತೀಂದ್ರಿಯಂ ಎಂದು ಹೇಳಲಾಗಿದೆ. ಯೋಗಲಬ್ಧ ಜ್ಞಾನವಂತೂ ಇದಕ್ಕಿಂತ ಬಹು ಮೇಲಿನದು. ಹೀಗೆಂತಲೇ ನಾವು ಮನ-ಬುದ್ಧಿಗಳ ತಾರತಮ್ಯವನ್ನು ಅರಿಯೆವು. ಆದುದರಿಂದ

ಇನ್ನೊಮ್ಮೆ ಹೇಳುತ್ತೇನೆ: ಜಡ ಜ್ಞಾನದ ಯಂತ್ರವೇ ಮನ. "ನಿಶ್ಚಯ ಜ್ಞಾನವು ಬುದ್ಧಿಯದಾದರೆ ಸಂದಿಗ್ಧ ಜ್ಞಾನವು ಮನದ್ದು" ಎಂಬುದು ಪೂರ್ವಿಕರ ಸೂತ್ರವಾಗಿದೆ. ವೇದಾಂತಾಭ್ಯಾಸಿಗಳೆಲ್ಲರೂ ಇದನ್ನು ಬಲ್ಲರು. ಆಧುನಿಕ ಮಾನಸಶಾಸ್ತ್ರವು ಇನ್ನೂ ಹೀಗೆ ವಿಂಗಡಿಸಿ ನೋಡುವುದಕ್ಕೆ ಸಮರ್ಥವಾಗಿಲ್ಲ.

ಮಾನವರು ಬರೆ ತರ್ಕ, ಸ್ಮರಣೆ, ಕಲ್ಪನೆ ಇವಿಷ್ಟರಲ್ಲಿ ಬಲ್ಲಂತೆ ವಿಹರಿಸುವುದರಿಂದ ತೃಪ್ತರಾಗುತ್ತಿದ್ದರೆ ಬುದ್ಧಿಯ ಶುದ್ಧೀಕರಣವೂ ಉಚ್ಚೇಂದ್ರಿಯಗಳ ವಿಕಸನವೂ ಸುಲಭ ವಿಷಯಗಳಾಗಿಬಿಡುತ್ತಿದ್ದವು. ಆದರೆ ರೂಢಿಯ ಮೂಲಕ ಅವರು ವ್ಯವಹರಿಸುವ ವಿಚಾರೋಪಕರಣವು ಇನ್ನೂ ಒಂದಿದೆ, ಅದೇ ಮನವೆಂಬುದು.

ಮನವು ಗ್ರಹಣೇಂದ್ರಿಯವಾಗಿದೆ ( Receptive organ ) ನೇತ್ರ ಕರ್ಣಾದಿಗಳಮೇಲೆ ಬಿಂಬಿಸುವ ಆಕಾರಾದಿಗಳನ್ನು ಅದು ಸ್ವೀಕರಿಸಿ ಯುರೋಪಿಯನ್ನರು ಹೇಳುವ **ಸಂವೇದನೆ** ( Percetpion ) ಎಂಬ ವಿಧಾನಕ್ಕೆ ಅವುಗಳನ್ನು ಹೊರಳಿಸುತ್ತದೆ.

ಅದರ ಜೊತೆಗೆ ಅದು ಇನ್ನೊಂದು ಕೆಲಸವನ್ನೂ ಮಾಡುತ್ತದೆ. ಅದೇನೆಂದರೆ—ವಿಜ್ಞಾನ ( ಮತ್ತು ಬುದ್ಧಿ ) ಇವುಗಳಿಂದ ಚಿತ್ತದ ಕಡೆಗೆ ಕಳುಹಲ್ಪಟ್ಟ ಕಲ್ಪನೆ ಮತ್ತು ಆಕಾರ ( Ideas and images ) ಮೊದಲಾದವುಗಳನ್ನು ಅದು ಸ್ವೀಕರಿಸಿ ಮುಂದೆ ಚಿತ್ತದ ಕಡೆಗೆ ಸಾಗಿಸುತ್ತದೆ. ಈ ಮಧ್ಯಮಾರ್ಗದಲ್ಲಿ ಅವು ನಾವನ್ನುವ ತಿಳುವಳಿಕೆಯಾಗಿ ( Concepts ) ಪರಿಣಮಿಸುತ್ತದೆ.

ಉದಾಹರಣಾರ್ಥವಾಗಿ— ಒಂದು ಪುಸ್ತಕದ ಆಕೃತಿಯು ಯಾವಾಗ ಮನದ ಇದಿರಿಗೆ ಬರುವದೋ ಆಗ ಅದು 'ಪುಸ್ತಕವು'

ಎಂದು ಅನ್ನುತ್ತದೆ. ಈಗ ಅದು ಇಂದ್ರಿಯ ಗೋಚರವಾದ ವಸ್ತುವಿಗೆ ಗೊತ್ತಿದ್ದ ಒಂದು ಹೆಸರನ್ನು ನಿರ್ದೇಶಪಡಿಸಿದಂತಾಯಿತು. 'ಪುಸ್ತಕವು ಭಾಷಾಯುಕ್ತವಾಗಿರುತ್ತದೆ 'ಯೆಂದು ಹೇಳಿದರೆ ಇದು ದೂರದಿಂದ ಬಂದ ಊಹನೆಯು, ಅಥವಾ ಬೌದ್ಧಿಕ ವಿಚಾರವು.

ಒಂದು ಕೇವಲ ಇಂದ್ರಿಯಗೋಚರವಾದ ವಸ್ತುವನ್ನು ಶಬ್ದದಲ್ಲಿಡುತ್ತದೆ; ಇನ್ನೊಂದು ವಿಚಾರಿತ ವಿಷಯವನ್ನು ಶಬ್ದದಿಂದ ಮಂಡಿಸುತ್ತದೆ. ಸಂವೇದನೆ (Percept) ಮತ್ತು ಊಹನೆ (Concept) ಇವೆರಡೂ ಕೂಡಿದ್ದೇ ತಿಳಿವು. (understanding)

ಯುರೋಪಿಯನ್ ಸಿದ್ಧಾಂತದ ಪ್ರಕಾರ ತರ್ಕವೆಂಬುದು ಕೇವಲ ಈ ಸಂವೇದನೆ–ಊಹನೆಗಳನ್ನು ಸಜ್ಜುಗೊಳಿಸಿ, ಅದರ ಮೂಲಕ ಹೊಚ್ಚಹೊಸ ಪರಿಷ್ಕೃತ ಊಹನೆಗಳನ್ನು ಹೊರಡಿಸಿಕೊಳ್ಳುವುದೇ ಆಗಿದೆ. ಬಹು ಜನರು ಊಹನೆಗಳೆಂಬುವೆಲ್ಲಾ ಕೇವಲ ವಿಚಾರರೂಪಕ್ಕೆ ಹೊರಳಿಸಿದ ಸಂವೇದನೆಗಳೇ ಆಗಿರುತ್ತವೆಂದು ನಂಬಿದ್ದಾರೆ. ಈ ಸಿದ್ಧಾಂತಾನುಸಾರವಾಗಿ ಸಮಸ್ತ ವಿಚಾರವೆಂಬುದು ಭಾಷೆಗೆ ಪರಿವರ್ತಿಸಿದ ಇಂದ್ರಿಯಜನ್ಯ ಸಂಸ್ಕಾರಗಳ (Sensation) ಸಜ್ಜೀಕರಣವೇ ಆಗಿದೆ.

ನಾವು ದೇವದೂತನೊಬ್ಬನನ್ನು ಈಗ ಕಲ್ಪಿಸಲಿರುವೆವೆಂದು ತಿಳಿಯುವಾ. ನಾವು ಒಂದು ಮಾನವಾಕೃತಿಗೆ ಪಕ್ಷಿಗಳ ರೆಕ್ಕೆಗಳನ್ನೂ ಸೇರಿಸಿ ಈ ಸಂಯುಕ್ತ ಸ್ವರೂಪಕ್ಕೆ ದೇವದೂತನೆಂದು ನಾಮಕರಣ ಮಾಡುತ್ತೇವೆ. ಅದರಂತೆ ಪುಣ್ಯ, ಧೈರ್ಯ ಮೊದಲಾದ ಆಂತರಿಕ ಗುಣವೃತ್ತಿಗಳನ್ನು ಕುರಿತು ಮಾತನಾಡುವಾಗ ಇಂದ್ರಿಯಾನುಭವಗಳ ಆಚೆಗೆ ನಾವು ಒಂದಿಷ್ಟೂ ಹೋಗದೆ ಕೇವಲ ಪುಣ್ಯಕರವಾದ ಹಾಗೂ ಸಾಹಸದ ಕೃತಿಗಳ ದೃಶ್ಯಗಳನ್ನು ವರ್ಗೀಕರಿಸಿ ಅವುಗಳಿಗೆ ಪುಣ್ಯವೆಂದೂ ಧೈರ್ಯವೆಂದೂ ಹೆಸರುಗಳನ್ನು ಅಂಟಿಸುತ್ತೇವೆ.

ಇವೆಲ್ಲ ಸಿದ್ಧಾಂತಗಳು ಮನ ಅರ್ಥಬೋಧ ಮಾತ್ರದ ಸಂಬಂಧ ದಲ್ಲಿ ಸರಿಯಾಗಿವೆ. ಮನವೆಂಬುದು ಬಾಹ್ಯಾನುಭೂತಿಯ ಇಂದ್ರಿಯ ವಾಗಿದೆ. ವಿಚಾರದ್ದಲ್ಲ. ಬುದ್ಧಿಯಿಂದ ಚಿತ್ತಕ್ಕೆ ಅವು ಹೋಗು ತ್ತಿರುವಾಗ ಅದು ಮಾರ್ಗದಲ್ಲಿ ಅವುಗಳನ್ನು ಹಿಡಿದುಕೊಳ್ಳುತ್ತದೆ. ಆದರೆ ಹಾಗೆ ಹಿಡಿದುಕೊಂಡಿರುವವುಗಳನ್ನು ಮೇಲೆ ವರ್ಣಿಸಿದಂತೆ ಇಂದ್ರಿಯಾನುಭೂತಿಯ ರೂಪಕ್ಕೆ ತಿರುಗಿಸುತ್ತದೆ

ಅವುಗಳನ್ನು ಅದು ಇಂದ್ರಿಯಾನುಭವಗಳ ( Sensations ) ರೀತಿಯಲ್ಲಿ ಕಾಣುತ್ತದೆ. ಪಶುಗಳು ತಮ್ಮ ಮನದ ಸಹಾಯ ದಿಂದಲೇ ವಿಚಾರ ಮಾಡುತ್ತವೆ. ಆಕಾರ, ರೂಪ, ಧ್ವನಿ, ವಾಸ, ಸ್ಪರ್ಶ, ರುಚಿ ಮೊದಲಾದವುಗಳೊಡನೆ ಸಂಬಂಧವಿಲ್ಲದ ಯಾವ ಭಾವ ಗಳನ್ನೂ ಪಶುಗಳು ಭಾವಿಸಲು ಸಮರ್ಥವಾಗಲಾರವು. ಅವು ತಮ್ಮ ಇಂದ್ರಿಯಾನುಭೂತಿಗಳಿಗೆ ಬದ್ಧವಾಗಿವೆ. ಪಶುಗಳಲ್ಲಿ ಬುದ್ಧಿಯು ಸುಪ್ತವಾಗಿರುವುದರ ಕಾರಣವು ಇದೇ. ಅವುಗಳಲ್ಲಿ ಅದು ಕೆಲಸ ಮಾಡುತ್ತಿದ್ದರೂ ಪರದೆಯ ಹಿಂದಿದ್ದುಕೊಂಡೇ.

ಆದರೆ ಮಾನವನು ಇಂದ್ರಿಯಗಳಿಗೆ ಸಿಲುಕಲಾರದ ವಿಷಯ ಗಳನ್ನು ಅರಿಯಬಲ್ಲನು. ಬುದ್ಧಿಗ್ರಾಹ್ಯಂ ಅತೀಂದ್ರಿಯಂ. ಯೋಗ ಶಕ್ತಿಯು ವಿಕಾಸ ಹೊಂದಿದರೆ ಆಗ ನೀವು ದಿನಾಲು ಈ ಮಾತಿನ ಅನುಭವವನ್ನು ಪಡೆಯಬಲ್ಲಿರಿ. ಮಾನವನು ತಾನು ಮುಂಚೆ ಎಂದೂ ಕಂಡಿರದ ಹಾಗೂ ಕೇಳಿರದ ಸತ್ಯವನ್ನು ತನ್ನ ಬುದ್ಧಿಯಿಂದ ಕಾಣಬಲ್ಲನೆಂಬ ಒಂದೇ ತಥ್ಯವು ವಿಚಾರದ ವಿಷಯದಲ್ಲಿರುವ ಜಡ ಸಿದ್ಧಾಂತವನ್ನು ನಾಶಗೊಳಿಸುವುದಕ್ಕೆ ಸಾಕಾಗಿ ಬಿಡುತ್ತದೆ.

ಆ ಸಿದ್ಧಾಂತವು ಕೇವಲ ಮನವೊಂದರ ವಿಷಯದಲ್ಲಿ ಮಾತ್ರ ಸತ್ಯವಾಗಿದೆ. ಮನವು ಇಂದ್ರಿಯಗಳಿಗೆ ಪ್ರತಿಸ್ಫುರಣವನ್ನು ವ್ಯಕ್ತ ಪಡಿಸುತ್ತಿರುತ್ತದೆ. ಮತ್ತು ತಾನು ಸ್ವೀಕರಿಸಿದ ಇಂದ್ರಿಯಾನು ಭೂತಿಗಳನ್ನು ಕುರಿತು ಅದು ಯಾವಾಗಲೂ ಸಂವೇದನೆ–ಊಹನೆಗಳನ್ನು

ಮಾಡುತ್ತಲಿರುತ್ತದೆ. ಇವೆಲ್ಲವನ್ನು ಅದು ಕೆಲವು ಸಲ ಬಾಹ್ಯ ಜಗತ್ತಿನೊಳಗಿಂದಲೂ, ಕೆಲವು ಸಲ ಸುಪ್ತಸ್ಮೃತಿಯೊಳಗಿಂದಲೂ, ಇನ್ನು ಕೆಲವು ಸಾರೆ ಬುದ್ಧಿಯೊಳಗಿಂದಲೂ ಸಂಪಾದಿಸುತ್ತದೆ. ಆದರೆ ಅದು ಅವುಗಳನ್ನೆಲ್ಲ ಬುದ್ಧಿಯ ತಲೆಯ ಮೇಲೆ ಹೊರಿಸಲಿಕ್ಕೆ ಹವಣಿಸುತ್ತಲಿರುತ್ತದೆ.

ಮನವು ಇಂದ್ರಿಯ ಸಾಕ್ಷಿಯಿಲ್ಲದ ಪ್ರತಿಯೊಂದು ವಿಷಯವನ್ನು ನಿರಾಕರಿಸುವುದಲ್ಲದೆ ಅದನ್ನು ಒರೆಗೆ ಹಚ್ಚಲೆಳಸುವದು. 'ನಾನು ಅದನ್ನು ಕಂಡಿದ್ದೇನೆ.' 'ನಾನು ಅದನ್ನು ಕೇಳಿದ್ದೇನೆ.' 'ಅಂತಲೇ ಅದು ಸತ್ಯ.' ಮನದ ತರ್ಕವೆಂಬುದು ಇದೇ. ಯಾರ ಬುದ್ಧಿಯು ಒಡವಾಗಿ ಬೆಳೆದಿದೆಯೋ ಅಂಥವರು ಅದಕ್ಕಿಂತಲೇ ತಾವು ಕಂಡದ್ದಕ್ಕೆ ಅಥವಾ ಓದಿದ್ದಕ್ಕೆ ಅತಿಶಯ ಮಹತ್ವವನ್ನು ಕೊಡುವ ಮರುಳಿಗೆ ಬಿದ್ದಿರುತ್ತಿರುವರು. ಅಲ್ಪ ಶಿಕ್ಷಿತ ಮನುಷ್ಯನು 'ನಾನು ಅದನ್ನು ಮುದ್ರಿತ ಪುಸ್ತಕದಲ್ಲಿ ನೋಡಿದ್ದೇನೆ' ಎಂದು ಹೇಳುತ್ತಾನೆ. ಮತ್ತು ಇಲ್ಲಿಗೆ ಕೋಟಿಕ್ರಮವು ಮುಗಿಯಿತೆಂದು ಆತನು ತಿಳಿಯುತ್ತಾನೆ.

ಮನದ ವಿಷಯದಲ್ಲಿ ನಾವು ಮಾಡಬೇಕಾದುದೇನು? ಅದನ್ನು ಸ್ತಬ್ಧಗೊಳಿಸಬೇಕೆಂದು ಯೋಗಿಯು ಹೇಳುತ್ತಾನೆ. ಅದು ಕಾರ್ಯರತವಾಗಿರುವವರೆಗೆ ಜ್ಞಾನವು ಅಶಕ್ಯವಾಗಿದೆ. ನೀವು ಜ್ಞಾನದ ತುಣುಕುಗಳನ್ನು ಮಾತ್ರವೇ ಸಂಪಾದಿಸಬಹುದು. ಅದು ನಿಜ. ಯೋಗಿಗೆ ಶಾಂತವಾದ ಮನವು ಅಪರಿಹಾರ್ಯವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಆದರೆ ಇಂದ್ರಿಯಗಳ ಗತಿಯೇನು? ಮನದ ಊಹನೆಗಳನ್ನು (Concepts) ನೀವು ಹೊಡೆದೊಡಿಸಬಲ್ಲಿರಿ; ಆದರೆ ಸಂವೇದನೆಗಳಿಗೆ (Percepts) ನೀವೇನು ಮಾಡುವಿರಿ? ಸಮಾಧಿಯಲ್ಲಿರುವಾಗ ಮಾತ್ರವಲ್ಲದೆ ಇನ್ನಾವಾಗಲೂ ನೀವು ನೋಡುವುದನ್ನೂ ಕೇಳುವುದನ್ನೂ ನಿಲ್ಲಿಸಲಾರಿರಿ. ವೇದಾಂತಿಯು ಸಮಾಧಿಗೆ ಅತಿಶಯ

ಮಹತ್ವವನ್ನು ಕೊಡಲೊಲ್ಲದಿರುವ ಕಾರಣವು ಇಲ್ಲಿಯೇ ಇದೆ. ಇಂದ್ರಿಯಗಳ ಸಂವೇದನೆಗಳಿಂದ ತಪ್ಪಿಸಿಕೊಂಡು ಸುರಕ್ಷಿತವಾಗಿ ಇರುವುದಕ್ಕೆ ಆತನಿಗೆ ಅದೊಂದೇ ನೆಲೆಯಾಗಿದೆ.

ಸಮಾಧಿಯಲ್ಲಿದ್ದಾಗ ಮಾತ್ರವೇ ಜ್ಞಾನವನ್ನು ಅಭ್ಯಸಿಸಬಲ್ಲಿರಾದರೆ ನೀವು ಜೀವನವನ್ನೂ, ವಿಚಾರವನ್ನೂ ಪರಿತ್ಯಜಿಸಿದ ಬೈರಾಗಿಯೂ ನಿಸ್ಸಂಗಿಯೂ ಆಗಲೇಬೇಕಾಗುತ್ತದೆ. ಆ ವಿಭಾಜ್ಯವಾದ ಜಗತ್ತಿನ ಏಕತ್ವವನ್ನು ಅಸ್ವಾಭಾವಿಕವಾಗಿ ವಿಭಾಗಿಸಿ ಇಬ್ಭಾಗ ಮಾಡುವುದಕ್ಕೆ ಅದರ ಆಗತ್ಯವೇನೋ ಉಂಟು. ಆದರೆ ತಾಂತ್ರಿಕನು ಅದರ ಆಗತ್ಯವಿಲ್ಲವೆಂಬುದನ್ನು ಬಲ್ಲನು. ಆದರೆ ಸಮಾಧಿಯ ಬೆಲೆಯು ಅವನಿಗೆ ಗೊತ್ತಿಲ್ಲವೆಂತಲ್ಲ. ಆದರೂ ಅದೊಂದೇ ಏನೂ ಏಕಮಾತ್ರ ಉಪಾಯವಲ್ಲವೆಂದು ಅವನು ಬಲ್ಲನು. ಅವನು ತನ್ನ ಅಂತಃಕರಣವನ್ನೇ ಒಂದು ಬಗೆಯಿಂದ ಸಜ್ಜುಗೊಳಿಸಿಕೊಂಡಿರುತ್ತಾನೆ. ಅದರಿಂದ ಅವನು ತನ್ನ ನಡೆ, ನುಡಿ, ಕೃತಿ, ನಿದ್ರೆ, ಇನ್ನೇನಾದರೂ ಮಾಡುತ್ತಿದ್ದರೆ ಅದೆಲ್ಲವನ್ನೂ ಆತನು ಅರಿಯುತ್ತಲೇ ಇರುವನು. ಹೇಗೆ? ಕೇವಲವಾಗಿ ಮನದ ಊಹನಾ ಕ್ರಿಯೆಯನ್ನು (Conceptual activity) ಸ್ತಬ್ಧಗೊಳಿಸುವದೊಂದರಿಂದಲೇ ಅಲ್ಲ, ಅದರ ಸಂವೇದನಾ ಕ್ರಿಯೆಯನ್ನು (Perceptual activity) ಬುದ್ಧಿಯ ವಶಕ್ಕೆ ಒಪ್ಪಿಸುವದರ ಮೂಲಕ ಹಾಗಾಗುವದು.

ಬೇರೆ ಮಾತಿನಲ್ಲಿ ಹೇಳುವುದೆಂದರೆ— ಅವನು ನೋಡುತ್ತಾನೆ, ಕೇಳುತ್ತಾನೆ......ಇತ್ಯಾದಿ., ಆದರೆ ಮಾನಸಾಂತರ್ಗತವಾದ ಇಂದ್ರಿಯಗಳಿಂದಲ್ಲ; ಬುದ್ಧ್ಯಂತರ್ಗತವಾದ (ಪ್ರಾಕಾಮ್ಯವೆಂಬ) ಇಂದ್ರಿಯದಿಂದ. ಇದು ಯಾವ ಮಹದಂತರವನ್ನುಂಟುಮಾಡುವದೆಂಬುದನ್ನು ನೀವು ಕಾಣುವಿರಿ. ನೀವು ಪೂರ್ವದಕಿಂತ ಹೆಚ್ಚು ಪರಿಪೂರ್ಣತರವಾಗಿಯೂ, ಸೂಕ್ಷ್ಮತರವಾಗಿಯೂ, ಯಥಾರ್ಥವಾಗಿಯೂ ವಸ್ತುದರ್ಶನವನ್ನು ಪಡೆಯುವಿರೆಂಬುದಿಷ್ಟೇ ಅಲ್ಲ; ಹಿಂದೆ ಎಂದೂ ಇಲ್ಲದ ರೀತಿಯಲ್ಲಿ ವರ್ಣಾಕೃತಿಧ್ವನಿಗಳ ಗುಣಗ್ರಹಣ

ಮಾಡಲು ಸಮರ್ಥರಾಗುವಿರಿ. ಅದರ ಜೊತೆಗೇ ನಿಮಗೆ ಆ ವಸ್ತುವಿನ ಬಗೆಗೆ ಭಾನವುಂಟಾದ ಕ್ಷಣದಲ್ಲಿ ನೀವು ಅಂತರಾತ್ಮವನ್ನು, ಅದರ ಸಾರಭೂತ ಗುಣಧರ್ಮವನ್ನು, ವಸ್ತುವಿನ ಭಾವನಾ ಪ್ರಪಂಚವನ್ನು ಸಹ ಹಿಡಿದುಕೊಳ್ಳಲು ಸಮರ್ಥರಾಗುವಿರಿ. ಯೋಗದಲ್ಲಿ ಪ್ರಾಕಾಮ್ಯವೆಂದು ಹೇಳಲ್ಪಡುವುದು ಇದೇ. ಇಂದ್ರಿಯಗಳ ನಿರಂಕುಶ ಸಾರ್ವಭೌಮಿಕ ಕ್ರಿಯಾಶಕ್ತಿಯು ಇದರಲ್ಲಿ ಒಡಮೂಡಿರುವದು.

ಆದುದರಿಂದ ಯೋಗವು ಪೂರ್ಣತೆಗೆ ಮುಟ್ಟಿದಾಗ ಮನದಿಂದ ನಿಮಗೆ ತೊಂದರೆಯುಂಟಾಗುವದಿಲ್ಲ. ಅದು ಸಂವೇದನಕಾರ್ಯವನ್ನು ಬಿಟ್ಟುಗೊಟ್ಟು ಕೇವಲವಾಗಿ ಬುದ್ಧಿಯಿಂದ ಚಿತ್ತಕ್ಕೆ ಹೋಗುವ ವಸ್ತುಗಳನ್ನು ಸಾಗಿಸುವ ಕಾಲುವೆಯು ಮಾತ್ರವಾಗಿಬಿಡುವದು.

ಈ ಸ್ಥಿತಿಯನ್ನು ಗಳಿಸುವ ಮಾರ್ಗಗಳು ಎಷ್ಟೋ ಇವೆಯಾದರೂ ಅವುಗಳೊಳಗಿನ ಬಹು ಪಥಗಳಿಗೆ ಒಂದು ದೋಷದ ಕಾಟವು ಇದ್ದೇ ಇರುತ್ತದೆ. ಆ ದೋಷವಾವುದೆಂದರೆ—ಮನದ ವೈಚಾರಿಕ ಅಂಶವು ಸ್ತಬ್ಧವಾಗಿ ಬಿಟ್ಟರೂ ಅದರ ಸಂವೇದಕ ಅಂಶವು ಕ್ಷುಲ್ಲಕವಾದ ಪ್ರತಿಬಂಧಕ ಕ್ರಿಯೆಯನ್ನು ಗಟ್ಟಿಯಾಗಿ ಹಿಡಿದುಕೊಂಡೇ ಇರುತ್ತಿರುತ್ತದೆ. ಏಕಕಾಲಕ್ಕೆ ಜ್ಞಾನವನ್ನೆಬ್ಬಿಸುವದಕ್ಕೂ ಮನವನ್ನು ಶಾಂತಗೊಳಿಸುವದಕ್ಕೂ ಸಂಕಲ್ಪಶಕ್ತಿಯನ್ನು ಪ್ರಯೋಗಿಸುವದು ಸರ್ವೋತ್ತಮ ಪದ್ಧತಿಯು. ಈ ಪದ್ಧತಿಯಲ್ಲಿ ಎರಡು ಲಾಭಗಳಿವೆ. ಮೊದಲನೆಯದು—ಸಾಮಾನ್ಯಪದ್ಧತಿಗಳಲ್ಲಿರುವಂತೆ ಇದರಲ್ಲಿ ನೀವು ಮನವನ್ನು ಸಂಪೂರ್ಣವಾಗಿ ತೆರವು (Blank) ಮಾಡಬೇಕಾಗುವದಿಲ್ಲ. ಅದು ಒಳ್ಳೇ ಸಮರ್ಥವಾಗದೆಯಾದರೂ ಅಷ್ಟೇ ಕಷ್ಟಕರವಾದ ಕೃಚ್ಛ್ರಸಾಧನದಿಂದ ಅಥವಾ ತಪದಿಂದ ಮಾತ್ರ ಸಾಧ್ಯವಿದೆ. ಆದರೆ ಕೇವಲ ಇದರಲ್ಲಿ ನೀವು ನಿಮ್ಮ ತರ್ಕದ ಹಾಗೂ ಮನದ ಕ್ರಿಯೆಗಳ ಸ್ಥಳದಲ್ಲಿ ಉಚ್ಚಬುದ್ಧಿಯ ಕ್ರಿಯಾಶೀಲತೆಯನ್ನೂ, ಇಂದ್ರಿಯ ಸಂವೇದನಗಳ ಸ್ಥಳದಲ್ಲಿ ಪ್ರಾಕಾಮ್ಯದ ಕ್ರಿಯೆಯನ್ನೂ

ಅಂಶಾಂಶವಾಗಿ ನೆಲೆಗೊಳಿಸಿದರೆ ಸಾಕು. ಈ ಕ್ರಮವು ಕಡಿಮೆ ಕಷ್ಟಕರವೂ ಹೆಚ್ಚು ಸುಲಭವೂ ಆಗಿದೆ.

ಎರಡನೆಯ ಲಾಭವಾವುದೆಂದರೆ—ಸುಷುಪ್ತಿಯಲ್ಲಿದ್ದ ಹೊರತು ನೀವು ಇನ್ನಾವಾಗಲೂ ಮನದ ಸಂವೇದನೆಯನ್ನು ತಡೆದು ನಿಲ್ಲಿಸಲಾರಿರಿ; ವಿಚಾರವನ್ನು ನಿಲ್ಲಿಸಬಹುದು. ಅದರಂತೆಯೆ ನಿಮ್ಮ ಮನಸನ್ನು ಶೂನ್ಯ ( Blank ) ಗೊಳಿಸಲಿಕ್ಕೂ ಆಗುವಂತಿಲ್ಲ. ಜ್ಞಾನವನ್ನು ಸಾಧಿಸದಿದ್ದರೆ ನೀವು ಈ ಹೊಂಚುಗಾರನಂತಿರುವ ವಸ್ತುವನ್ನು ಹೇಗೆ ಹೊಡೆದೋಡಿಸುವಿರಿ? ಸಾಧಾರಣ ಸಂವೇದನೆಗಳು ತಮ್ಮ ಕಾರ್ಯವನ್ನು ನಿಲ್ಲಿಸಿಬಿಡುವುದಕ್ಕಿಂತ ಮುಂಚೆ ಪ್ರಾಕಾಮ್ಯವು ತನ್ನ ಕಾರ್ಯವನ್ನು ಆರಂಭಿಸಿರಲಿಕ್ಕೇಬೇಕು.

ಆದುದರಿಂದ ಇದು ತಾಂತ್ರಿಕಪದ್ಧತಿಯ ತೃತೀಯ ವ್ಯಾಪಾರವಾಗಿದೆ. ನೀವು ಸಂಕಲ್ಪಶಕ್ತಿಯನ್ನು ವಿಕಾಸಗೊಳಿಸಿರಿ. ಸಂಕಲ್ಪಶಕ್ತಿಯನ್ನು ನೀವು ಜ್ಞಾನವನ್ನೆಬ್ಬಿಸುವುದಕ್ಕೂ, ಮನ ಹಾಗೂ ನಿಮ್ಮ ಬುದ್ಧಿ ಇವುಗಳನ್ನು ಸ್ತಬ್ಧಗೊಳಿಸುವದಕ್ಕೂ ಪ್ರಯೋಗಿಸಿರಿ. ಇವುಗಳ ಸ್ಥಳವನ್ನು ಆಕ್ರಮಿಸುವಂತೆ ಜ್ಞಾನವನ್ನು ಪ್ರಯೋಗಿಸಿರಿ.



# ೬ ಚಿತ್ತ

ಪ್ರಕರಣೋಪಕ್ರಮಣಿಕೆ:—

"ಸ್ಸತ್, ಚಿತ್, ಆನಂದ, ವಿಜ್ಞಾನ, ಮನ, ಪ್ರಾಣ, ಅನ್ನ ಎಂಬೀ ಏಳರಲ್ಲಿ ಕೆಳಗಿನ ಮೂರು ಮಾತ್ರವೆ ನಮಗೆ ಪರಿಚಿತ ವಸ್ತುಗಳು. ಈ ಮೂರನ್ನೇ ಆರಾಗಿ ವಿಭಾಗಿಸಲೂ ಬಹುದು. ಮನವನ್ನೇ ಮನ-ಬುದ್ಧಿಗಳೆಂದೂ, ಪ್ರಾಣವನ್ನೇ ಚಿತ್ತ-ಪ್ರಾಣಗಳೆಂದೂ, ಅನ್ನವನ್ನೇ ಸೂಕ್ಷ್ಮಅನ್ನ ಹಾಗೂ ಸ್ಥೂಲ ದೇಹವೆಂದೂ ಇಬ್ಭಾಗಗೊಳಿಸಬಹುದು. ಪ್ರಸ್ತುತ ಗ್ರಂಥದಲ್ಲಿ ಗುರು ಅರವಿಂದರು ಸಾಧಾರಣವಾಗಿ ಹೀಗೆಯೇ ವಿಭಾಗ ಮಾಡಿದ್ದಾರೆ. ಆದರೆ ಸೂಕ್ಷ್ಮ ಅನ್ನಕ್ಕೆ ಸ್ಥೂಲಪ್ರಾಣವೆಂದು ಸಹ ಅನ್ನಬಹುದಂತೆ, ಆದರೂ ಅದು ಸ್ಥೂಲಭೌತಿಕದ್ದೇ ಸೂಕ್ಷ್ಮರೂಪ. ಇದರ ಬಗೆಗೆ ಪ್ರಸ್ತುತ ಪುಸ್ತಕದಲ್ಲಿ ಮುಂದೆ ವಿವರಣೆ ಬರುವದು. ಮನ-ಬುದ್ಧಿಗಳ ವಿಷಯದಲ್ಲಿ ಹಿಂದೆಯೆ ವಿವರಣೆಯು ಬಂದುಹೋಯಿತು. ಸದ್ಯದಲ್ಲಿ ಚಿತ್ತ-ಪ್ರಾಣಗಳ ಪ್ರಸ್ತಾಪ.

ಜ್ಞಾನದ ಯಂತ್ರವು ಸ್ಥೂಲದಲ್ಲಿ ಮೆದುಳಾಗಿಯೂ, ಸೂಕ್ಷ್ಮದಲ್ಲಿ ಬುದ್ಧಿಯಾಗಿಯೂ, ಕಾರಣದಲ್ಲಿ

ವಿಜ್ಞಾನವಾಗಿಯೂ ಇರುವಂತೆ ರಸಭೋಗದ ಯಂತ್ರವು ಸ್ಥೂಲದಲ್ಲಿ ವಕ್ಷಸ್ಥಲ ಅಥವಾ ಬಾಹ್ಯಹೃದಯವಾಗಿಯೂ, ಸೂಕ್ಷ್ಮದಲ್ಲಿ ಚಿತ್ತವಾಗಿಯೂ, ಕಾರಣದಲ್ಲಿ ಹೃದ್ಗಗನವಾಗಿಯೂ ಇದೆಯೆಂದು ಯೋಗಾನುಭವವು ಹೇಳುತ್ತದೆ.

ವಿಜ್ಞಾನವು ಹೇಗೆ ದಿವ್ಯಜ್ಞಾನದ ಕ್ಷೇತ್ರವಾಗಿದೆಯೋ ಹಾಗೆ ಹೃದ್ಗಗನವು (*Psychic*) ದೈವೀ ರಸಾನುಭೂತಿಯ ಕ್ಷೇತ್ರವಾಗಿದೆ. ಈ ಹೃದ್ಗಗನವೆಂಬುದು ಪಿಂಡಸ್ಥ ಈಶ್ವರನ ಗರ್ಭಗುಡಿಯಾಗಿದೆಯೆಂದು ಪುರಾತನ ಗ್ರಂಥಗಳಲ್ಲಿ ಮೇಲಿಂದಮೇಲೆ ಹೇಳಲ್ಪಡುತ್ತದೆ. "ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ತಿಷ್ಠತಿ." ಆದುದರಿಂದಲೇ ಪುರುಷನಿಗೆ ಸರ್ವಭೂತ ಗುಹಾಶಯಂ ಎಂದು ಹೇಳಲಾಗುವದು. ಈ ಹೃದ್ಗುಹೆಯು ಭೌತಿಕ ದೇಹದೊಳಗಿನ ವಕ್ಷಸ್ಥಲವೂ ಅಲ್ಲ, ಸೂಕ್ಷ್ಮದೇಹದೊಳಗಿನ ಹೃದಯವೃತ್ತಿಯೂ ಅಲ್ಲ. ಕಾರಣ ದೇಹವೇ ಆ ಹೃದ್ಗುಹೆಯು. ಈ ಕಾರಣಕ್ಕೆ ನಾಶವಿಲ್ಲ. ಅಂತೇ ಅದು ನಿತ್ಯ. ಅದರಂತೆ ಅದರೊಳಗಿನ ರಸವೃತ್ತಿಗೂ ನಿತ್ಯವೆಂದೂ ಸತ್ಯವೆಂದೂ, ಆದುದರಿಂದಲೇ ಧರ್ಮ ಪೂರ್ಣವೆಂತಲೂ ಅನ್ನಬೇಕಾಗುವದು.

ದೈವೀ ರಸಾನುಭೂತಿಯ ಕ್ಷೇತ್ರವು ಹೀಗೆ ಕಾರಣ ದಲ್ಲಿದೆಯಾದರೂ ಸ್ಥೂಲ ಸೂಕ್ಷ್ಮಗಳಲ್ಲಿಯೂ ಅದರ ಸಮಕೇಂದ್ರಗಳಿಲ್ಲದೆಯಿಲ್ಲ. ಸೂಕ್ಷ್ಮ ದೇಹದೊಳಗಿನ ಅದರ ಸಮಕೇಂದ್ರವು ಚಿತ್ತವೇ ಆಗಿದೆ. ಅಂತೇ ಅದರ ಲಕ್ಷಣಗಳೂ ಇದರ ಲಕ್ಷಣಗಳೂ ಎಷ್ಟೋ ಸಾರೆ ವಿಂಗಡಿಸಲಿಕ್ಕಾಗದಂತೆ ಒಂದರೊಳಗೊಂದು ಬೆರೆತು ಹೋಗಬಲ್ಲವು.

ಪ್ರಾಣದ ರಸಮಯ ಭಾಗವೇ ಚಿತ್ತವು. ಅದು ಸ್ಥೂಲ ದಶಾಪ್ರಾಪ್ತನಾದ ಜೀವನ ಆನಂದ ಕ್ಷೇತ್ರವಾ ಗಿದೆ. ಅದರಂತೆ ಅವನ ಭಾಂಡಾರ ಗೃಹವೂ ಇದೇ ಆಗಿದೆ. ಅಂತಲೇ ಸ್ಮೃತಿರಾಶಿಯೆಲ್ಲ ಇಲ್ಲಿಯೇ ಸುಪ್ತ ವಾಗಿ ಬಿದ್ದುಕೊಂಡಿರುತ್ತದಂತೆ.

ಜನ್ಮಜನ್ಮಾಂತರದ ಸ್ಮೃತಿರಾಶಿಯು ಅವಿನಾಶಿ ಯಾದ ಕಾರಣದೇಹದ ತಳದಲ್ಲಿರುವ ಮೂಲಾಧಾರ ಪದ್ಮದೊಳಗೆ ಇರುವಂತೆ ಪ್ರಚಲಿತ ಜನ್ಮದ ಸ್ಮೃತಿ ಭಾಂಡಾರವು ಚಿತ್ತದ ತಳದಲ್ಲಿ ನೆಲೆಗೊಂಡು ಇರು ತ್ತದೆ. ಸ್ಥೂಲಜಗದಲ್ಲಿ ಸ್ಥೂಲದೇಹದ ಮರಣದವಾದ ಬಳಿಕ ಕೆಲವೊಂದು ಕಾಲದ ಮೇಲೆ ಸೂಕ್ಷ್ಮಜಗತ್ತಿ ನಲ್ಲಿ ಸೂಕ್ಷ್ಮದೇಹಕ್ಕೂ ಮೃತಿಯುಂಟಾಗಲು ಆಗ ಆ

ಸೂಕ್ಷ್ಮದೇಹದ ಅಂಗಗಳಲ್ಲೊಂದಾದ ಚಿತ್ತವೆಂಬುದ ರಲ್ಲಿದ್ದ ಸ್ಮೃತಿಭಾಂಡಾರವು ಕಾರಣದೇಹದ ತಳವನ್ನು ಸೇರುತ್ತದೆ. ಆ ಮೇಲೆ ಪುನಃ ಜೀವನಿಗೆ ಜನ್ಮಪ್ರಾಪ್ತಿ ಯಾಗಲು ಅದು ಆತನೊಡನೆ ಬಂದು ಮೂಲಾಧಾರ ದಲ್ಲಿಯೇ ಇದ್ದುಕೊಂಡು ಜನ್ಮಾಂತರ ಸಂಸ್ಕಾರದ ರೂಪದಲ್ಲಿ ಚಿತ್ತ ಮನಬುದ್ಧಿಗಳನ್ನು ಅಲುಗಾಡಿಸುವ ದೆಂದು ಗುರು ಅರವಿಂದರು ಹೇಳುತ್ತಾರೆ.

ಚಿತ್ತವು ಹೀಗೆ ರಸಾನುಭವದ ಹಾಗೂ ಸ್ಮೃತಿ ರಾಶಿಯ ಕ್ಷೇತ್ರವಾಗಿದೆ. ಬುದ್ಧಿಗೊಂದು ಮನವೆಂಬ ಜಡ ಅವಸ್ಥೆಯಿರುವಂತೆ ಚಿತ್ತಕ್ಕೂ ಪ್ರಾಣವೆಂಬು ದೊಂದು ವಾಸನಾಮಯ ಅವಸ್ಥೆಯಿರುತ್ತದೆ. ಈ ವಾಸನಾಮಯ ಪ್ರಾಣವನ್ನು ಕುರಿತು ಮುಂದೆ ಹೇಳ ಲಾಗುವುದು. ಆದರೆ ಸದ್ಯಕ್ಕೆ ಚಿತ್ತದ ವಿಷಯ

ಬುದ್ಧಿಗೆ ಬದಲಾಗಿ ಜ್ಞಾನವೂ, ಮನಕ್ಕೆ ಬದ ಲಾಗಿ ಪ್ರಾಕಾಮ್ಯವೂ ಅರಳಬೇಕಾಗಿರುವಂತೆ ಈ ಚಿತ್ತಕ್ಕೆ ಬದಲಾಗಿ ಕಾರಣಸ್ಥವಾದ ಹೃದಯಗುಹೆಯ *(Psychic)* ದೈವೀ ಶಾಂತಿರಸದ ಸೆಲೆಯೊಡೆಯಬೇಕು. ಆಗ ರಸವು ರಸದಕಾರ್ಯವನ್ನಷ್ಟೇ ಮಾಡುವದು; ಪ್ರಬೋಧನೆ, ಪ್ರೇರಣೆ, ಉದ್ದೀಪನೆ ಮೊದಲಾದವುಗಳ ಕಾರಭಾರಕ್ಕೆ ಹವಣಿಸುವದಿಲ್ಲ.

ಚಿತ್ತದ ರಸಗಳಲ್ಲಿ ಅಬ್ಬರವಿರುತ್ತದೆ. ಆದ್ದರಿಂದ ಅವು ಉದ್ರಿಕ್ತದಶೆಯಲ್ಲಿರುತ್ತವೆ. ಅಲ್ಲದೆ ಅವು ನಿತ್ಯ ಹಾಗೂ ವಿಕೃತವೆಂದು ಎರಡು ರೂಪಗಳನ್ನು ಧರಿಸಿ ಒಂದರೊಳಗೊಂದು ತಳಕುಹೊಯ್ದು ಒಂದು ಬಗೆಯ ಕಾವರವನ್ನೆಬ್ಬಿಸುವವು. ಅಂತಲೇ ಅವುಗಳಿಗೆ ಭಾವೋದ್ರೇಕಗಳೆಂದೆನ್ನಲಾಗುವದು. ಬುದ್ಧಿಯ ಹತೋಟಿಯಿಂದ ಅಥವಾ ವಿವೇಕದ ನಿಯಂತ್ರಣದಿಂದ ರಸಗಳಿಗೊಂದು ಬಗೆಯ ಶಾಂತದಶೆಯು ಪ್ರಾಪ್ತವಾಗುವದುಂಟು. ಆದರೂ ಅಲ್ಲಿ ರಸನಿರ್ಝರಿಣಿಯು ಬತ್ತಿ ಹರಿಗಡಿದ ಹಾಗೆ ತೋರುತ್ತಿರುತ್ತದೆ. ಆದರೆ ಹೃದ್ಗಗನದ ವಿಕಾಸದಿಂದ ಶಾಂತ ದಶಾಪ್ರಾಪ್ತವಾದ ರಸಾನುಭೂತಿಯ ರೀತಿಯೇ ಬೇರೆ. ಇವರಲ್ಲಿ ಉದ್ರೇಕವಿಲ್ಲ, ಕ್ಷೀಣತೆಯಿಲ್ಲ. ಕೇವಲ ಶಾಂತಿರಸವಿದೆ.

ಇನ್ನು ಮೇಲೆ ನಾನು ಚಿತ್ತದ ಕಡೆಗೆ ಬರುತ್ತೇನೆ. ಚಿತ್ತದಲ್ಲಿ ಎರಡು ಸ್ತರಗಳಿವೆ. ಒಂದು ಭಾವನೆಗಳ ( Emotions ) ಸಲುವಾಗಿ ಮತ್ತೊಂದು ನಿಶ್ಚೇಷ್ಟಿತ ಸ್ಮೃತಿಗಾಗಿ ( Passive memory )

ಕಂಡಂಥ, ಆಲೋಚಿಸಿದಂಥ, ಅನುಭವಿಸಿದಂಥ ವಿಷಯಗಳ ಮುದ್ರೆಗಳು ಚಿತ್ತದ ನಿಮ್ನ ಸ್ತರದಲ್ಲಿ ಅಂಕಿತವಾಗಿ, ಜೀವವು ಈಗಿನ ದೇಹವನ್ನು ಬಿಡುವವರೆಗೆ ಅಲ್ಲಿ ಉಳಿಯುವವು. ಅನಂತರದಲ್ಲಿಯೂ ಇವೆಲ್ಲ ಮುದ್ರೆಗಳು ಸೂಕ್ಷ್ಮದೇಹಗತವಾಗಿ ಜೀವನೊಂದಿಗೆ ಪರಲೋಕವನ್ನು ಸೇರುವವು. ಪುನಃ ಅವನು ಜನ್ಮಿಸುವಾಗ ಅವು ಮೂಲಾಧಾರದಲ್ಲಿ ಅಗೋಚರ ಸಂಸ್ಕಾರಗಳಾಗಿ ಆತನೊಂದಿಗೆ

ಬರುವವು. (ಸ್ಮೃತಿಗಳು ಕರಗಿ ಸಂಸ್ಕಾರರೂಪವನ್ನು ಧರಿಸುವದ ರಿಂದಲೇ) ಜನರಿಗೆ ಪೂರ್ವಜನ್ಮಗಳ ಸ್ಮರಣೆಯಿರುವದಿಲ್ಲ. ಆದರೆ ಮೂಲಾಧಾರದೊಳಗಿರುವ ಕುಂಡಲಿನಿಯನ್ನು ಜಾಗೃತಗೊಳಿಸುವದರ ಮೂಲಕ ಅವುಗಳನ್ನು ಸ್ಮೃತಿಪಥಕ್ಕೆ ತರಬಹುದಾಗಿದೆ. ಬುದ್ಧಿಯ ಲ್ಲಿರುವ ಸಕ್ರಿಯ ಸ್ಮೃತಿಯ ಆಹ್ವಾನ ಬರುವವರೆಗೆ ಅವು ಚಿತ್ತದಲ್ಲಿ ಅಗೋಚರ ಸ್ಥಿತಿಯಲ್ಲಿರುತ್ತವೆ. ಆಮೇಲೆ ಅವು ಬುದ್ಧಿಯ ಕಡೆಗೆ ಅವಿರತವಾಗಿ (ಸಂಸ್ಕಾರರೂಪದಿಂದಲೇ) ಬರತೊಡಗುವವು. ಬಯಸ ದಿದ್ದರೂ ಪುನಃ ಪುನಃ ಬರುತ್ತಲೇ ಇರುವುದು ಅವುಗಳ ಪರಿಪಾಠವೇ ಆಗಿದೆ. ರೂಢಿಗೊಂಡ ವಿಚಾರ, ಕಲ್ಪನೆ, ಭಾವನೆ, ಅಭಿಪ್ರಾಯಗಳ ರೂಪದಲ್ಲಿ ಅವು ಬರುತ್ತಿರುವವು. ಮನವೇ ಅವುಗಳ ಪುನರಾವರ್ತನದ ಕ್ಷೇತ್ರವಾಗಿರುವದರಿಂದ ಅದು ಸ್ತಬ್ಧವಾಗುವವರೆಗೆ ಯೋಗಿಗೆ ಇವೇ ಪ್ರಧಾನ ವಿಘ್ನಗಳು.

ಎರಡನೆಯ ಅಥವಾ ಮೇಲಿನ ಸ್ತರವು ಭಾವನೆಗಳದಾಗಿದೆ. ಭಾವನೆಗಳು (Emotions) ಚಿತ್ತದೆಡೆಗೆ ಸಂಕಲ್ಪಶಕ್ತಿಯು ಕಳುಹಿಸಿದ ಆದರ ಕ್ರಿಯೆಗಳೇ ಆಗಿರುತ್ತವೆ. ಅಲ್ಲಿ ಅವು ಉದ್ದೀಪನ ಸ್ವರೂಪ ವನ್ನು ಧರಿಸುತ್ತವೆ.

ಅದರಲ್ಲಿ ಮೂರು ವಿಭಾಗಗಳಿರುತ್ತವೆ. ವಿಚಾರೋದ್ದೀಪನ, ಭಾವೋದ್ದೀಪನ, ಕರ್ಮೋದ್ದೀಪನ. (Thought impulses, impulses of feeling, impulses of action)

ಮೊದಲನೆಯ ಪ್ರಕಾರದವುಗಳಿಗೆ ಸಹಜಾತ ಸ್ಫೂರ್ತಿ, ಪ್ರತಿಭೆ, ಗಭೀರದೃಷ್ಟಿ, ಅಂತರ್ಜ್ಞಾನ (Instincts, inspirations, insights, intuitions) ಮೊದಲಾದ ಹೆಸರುಗಳಿವೆ. ವಾಸ್ತವಿಕವಾಗಿ ಅವು ಸಹಸ್ರದಳದೊಳಗಿಂದ ಜೀವನು ಚಿತ್ತಕ್ಕೆ ಕಳಿಸಿದ ಸಂದೇಶಗಳೇ ಆಗಿ ರುತ್ತವೆ. ಅವು ಬುದ್ಧಿಯ ದೃಷ್ಟಿಗೆ ಬೀಳಲಾರದೆ ಸಾಗಿ ಬಂದು ಚಿತ್ತದಲ್ಲಿ ನೆಲೆಗೊಳಿಸಿ ಇದ್ದುಕೊಂಡು ಯಾವದಾದರೊಂದು ಹೊರ ಗಿನ ಅಥವಾ ಒಳಗಿನ ಸಂಘರ್ಷಣದಿಂದ ಅಕಸ್ಮಾತ್ತಾಗಿ ಅಲ್ಲಿಯಿಂದ

ಹೊರಟೆದ್ದು ಬಂದು ಬುದ್ಧಿಗೆ ಅದೇ ವೇಗದಿಂದ ಅಪ್ಪಳಿಸುತ್ತವೆ. ಆದ್ದರಿಂದ ಅವು ನೇರವಾಗಿ ವಿಜ್ಞಾನದಿಂದಲೇ ಹೊರಟು ಬುದ್ಧಿಯ ಕಡೆಗೆ ಬಂದ ಪ್ರತಿಭಾದಿಗಳೋ ಏನೋ ಎಂದೆನ್ನುವಂತೆ ಕಾಣಿಸಿ ಕೊಳ್ಳುತ್ತವೆ.

ಆದರೆ ಅವುಗಳಿಗೆ ಭಾವನಾವೃತ್ತಿಗಳ ಬಣ್ಣವು ಬಳಿದುಕೊಂಡಿರುತ್ತದೆ, ಮೇಲಾಗಿ ಚಿತ್ತದಲ್ಲಿರುವ ಸ್ಮೃತಿಗಳೂ ಅಲ್ಲಿರುವ ಇನ್ನುಳಿದ ಜಂಗುಳಿಯೂ ಅವುಗಳನ್ನು ವಿಕೃತಗೊಳಿಸಿರುವವಲ್ಲದೆ ಅವುಗಳನ್ನು ಮೇಲಕ್ಕೆ ತರುವ ಕಲ್ಪನಾವೃತ್ತಿಯಿಂದ ಅವು ವಿಪರೀತದಶಾಪ್ರಾಪ್ತವಾಗಿರುತ್ತವೆ.

ಶ್ರದ್ಧೆ, ಭಕ್ತಿ, ಬುದ್ಧಿವೈಭವ, ಕಾವ್ಯಪ್ರತಿಭೆ ಮುಂತಾದುದಾಗಿ ಕರೆಯಲ್ಪಡುವವುಗಳಲ್ಲಿ ಬಹುಭಾಗವು ಇದೇ ಮೂಲದಿಂದ ಉಗಮಿಸುತ್ತದೆ. ಸಾಮಾನ್ಯಮಾನವನಿಗೆ ಇದು ಪ್ರಯೋಜನಕರವಾಗಿದೆ; ಪಶುಗಳಿಗೆ ಇದರ ಮಹತ್ವವು ಅತಿಶಯವಾಗಿದೆ; ಆದರೆ ಯೋಗಿಗೆ ಇದೊಂದು ಪ್ರತಿಬಂಧಕವೇ.

ಸಾಧಾರಣವಾಗಿ ಭಾವನಾವೃತ್ತಿಗಳೆಂದು ಹೇಳಲ್ಪಡುವವುಗಳೇ ಭಾವೋದ್ದೀಪನಗಳು. ಭಾವನಾವೃತ್ತಿಗಳು ನೈಸರ್ಗಿಕ ಅಥವಾ ತ್ರಿಕಾಲಾಬಾಧಿತವೆಂದೂ ಕೃತ್ರಿಮ ಅಥವಾ ವಿಕಾರಗಳೆಂದೂ ಎರಡು ಪ್ರಕಾರವಾಗಿವೆ. ಪ್ರೇಮವು ನೈಸರ್ಗಿಕವಾಗಿದೆ, ಅದು ಜ್ಞಾನ ಮೂಲದಿಂದ ಸಾಗಿಬರುತ್ತದೆ, ಕ್ರಮವಿಕಾಸ ( Evolution ) ದಲ್ಲಿ ಅದು ತಾಳಿಬಾಳುತ್ತದೆ; ತಿರಸ್ಕಾರವು ಪ್ರೇಮದ ವಿಕಾರವು, ಅದು ಅಜ್ಞಾನದಿಂದುಂಟಾದ ಪ್ರತಿಕ್ರಿಯೆಯಾಗಲಿ ವಿಕೃತಿಯಾಗಲಿ ಆಗಿರುತ್ತದೆ. ಹಾಗೆಯೇ ಧೈರ್ಯವು ತ್ರಿಕಾಲಾಬಾಧಿತ, ಭಯವು ವಿಕಾರ, ಸುಹೃದಯತೆಯು ಶಾಶ್ವತ; ಘೃಣಾ, ಶುಷ್ಕ ಸಹಾನುಭೂತಿ, ಪ್ರತಿರೋಧ, ಜುಗುಪ್ಸೆ ಮೊದಲಾದವುಗಳೆಲ್ಲ ವಿಕಾರಗಳು.

ನೈಸರ್ಗಿಕವೂ, ತ್ರಿಕಾಲಾಬಾಧಿತವೂ ಆಗಿರುವ ಪ್ರೇಮ, ಧೈರ್ಯ, ದಯಾ, ಸತ್ಯ, ಉದಾರಮನೋರಥ ಮೊದಲಾದವುಗಳೆಲ್ಲ

ಧರ್ಮವಾಗಿವೆ; ಬೇರೆಯವುಗಳು ಅಧರ್ಮವಾಗಿವೆ. ಈ ಧರ್ಮಾಧರ್ಮವಿವೇಚನೆಯು ತ್ರಿಕಾಲಾಬಾಧಿತವಾದ ದೃಷ್ಟಿಕೋನದಿಂದ ಮಾಡಿದ್ದೇ ಹೊರತು ಸಾಮಾಜಿಕ ಅಥವಾ ಲೌಕಿಕ ವಿಚಾರದಿಂದಾಗಲಿ, ಸಾಮಯಿಕ ಧರ್ಮಾಧರ್ಮ ವಿಚಾರದಿಂದಾಗಲಿ ಮಾಡಿದ್ದಲ್ಲ. ಅಲ್ಲದೆ ಅಧರ್ಮದ ಅಗತ್ಯವೂ ಯಾವಾಗಲೂ ಇದೆ, ಅಪರಿಣತಿಯಿಂದ ಪರಿಣತಿಗೆ ಅಥವಾ ನೀಚದಿಂದ ಸರ್ವೋಚ್ಚತರ ಧರ್ಮಕ್ಕೆ ಹೋಗುವದಕ್ಕೆ ಅದು ಪೂರ್ವಸಿದ್ಧತೆಯ ಪಥವಾಗಿದೆ.

ಯೋಗಿಯು ವಿಕಾರಗಳನ್ನು ಹೊಡೆದೋಡಿಸಬೇಕಾಗಿದೆಯೇ ಹೊರತು ಸನಾತನ ಧರ್ಮಗಳನ್ನಲ್ಲ.

ಉದ್ದೀಪನೆಯ ಮೂರನೆಯ ಪ್ರಕಾರವೆಂದರೆ ಕರ್ಮೋದ್ದೀಪನವು. ಅದರ ಅಸ್ತಿತ್ವವು ಮಾನವನ ರಾಜಸಿಕ ವಿಕಾಸಕ್ಕೆ ಸಂಬಂಧಿಸಿ ಚಿತ್ತದಲ್ಲಿ ತಾತ್ಕಾಲಿಕವಾಗಿ ಸಜ್ಜಿತವಾಗಿರುತ್ತದೆ. ಅಶುದ್ಧ ರಾಜಸಿಕ ಮನುಷ್ಯನು ವಾಸನೆ ಇಲ್ಲವೆ ಭಾವನೆ ಇವೆರಡರಲ್ಲಿ ಯಾವದಾದರೊಂದು ಶಕ್ತಿಯ ಹೊರತು ಸುಲಭವಾಗಿ ಕರ್ಮೋದ್ಯತನಾಗುವದಿಲ್ಲ. ಪ್ರೇಮ, ತಿರಸ್ಕಾರ, ಮಹತ್ವಾಕಾಂಕ್ಷೆ, ರೋಷ ಮೊದಲಾದವುಗಳು ಆತನನ್ನು ತಟ್ಟಿ ಎಬ್ಬಿಸುತ್ತಿರಬೇಕು. ಇಲ್ಲದಿದ್ದರೆ ಆತನು ಕಾರ್ಯಪರನಾಗಲಾರನು. ಒಂದು ವೇಳೆ ಕಾರ್ಯಪರನಾದರೂ ಅದು ನಿಸ್ತೇಜವಾಗಿ ಮಾತ್ರ. ಆತನಿಗೆ ವಾಸನಾರಹಿತವಾದ ಮತ್ತು ಭಾವನಾವೃತ್ತಿಯ ಬಂಧನಕ್ಕೆ ಸಿಲುಕದ ಶುದ್ಧಕಾರ್ಯ ಪ್ರವೃತ್ತಿಯೆಂಬುದರ ಅರ್ಥವೇ ತಿಳಿಯಲಿಕ್ಕೆ ಶಕ್ಯವಿಲ್ಲ.

ಭಾವನಾವೃತ್ತಿಗಳು ಆತನ ಸ್ವಭಾವಕ್ಕೆ ಬಣ್ಣವನ್ನು ಮಾತ್ರ ಕೊಡುತ್ತಲಿರಬಹುದು. ಪರಿಪಾಠಿಯಿಂದ ಆತನು ಪ್ರೇಮ, ಧೈರ್ಯ, ಗೌರವ, ಸತ್ಯತರ ಮಹತ್ವಾಕಾಂಕ್ಷೆ, ಆತ್ಮವಿಶ್ವಾಸ ಮೊದಲಾದ ಅನುಭೂತಿಗಳಿಂದೊಡಗೂಡಿದವನಾಗಿರಲೂ ಬಹುದು; ಆದರೆ ಎಂಥ ಉದಾರತರವಾದ ವೈಯ್ಯಕ್ತಿಕ ಪ್ರವೃತ್ತಿಯಿಂದಲೂ ಕೂಡ ಕಾರ್ಯಪರನಾಗಕೂಡದು. ವಿಜ್ಞಾನದಲ್ಲಿರುವ **ಪುರುಷ**ನೊಡನೆ ನೇರವಾದ

ಸಂಬಂಧವುಳ್ಳ **ಸಂಕಲ್ಪಶಕ್ತಿ**ಯಿಂದ ಬಂದ ಪ್ರೇರಣೆಗೆ ವಿಧೇಯು ನಾಗಿ ಕರ್ಮಪರನಾಗತಕ್ಕದ್ದು. ಸಂಕಲ್ಪಶಕ್ತಿಯು ಏಕೆ ಆ ವಿಶಿಷ್ಟ ಪಥದಲ್ಲಿ ವರ್ತಿಸುತ್ತಿದೆಯೆಂಬುದನ್ನು ಬುದ್ಧಿಯಿಂದ ಅರಿತುಕೊಂಡು, ತನ್ನ ಸ್ವಭಾವಕ್ಕೆ ಸಂಗತವಾಗಿರುವ ಭಾವನಾವೃತ್ತಿಗಳಿಂದ ಕರ್ಮ ವನ್ನು ಉಜ್ವಲಗೊಳಿಸುತ್ತ ಕಾರ್ಯಪರನಾಗತಕ್ಕದ್ದು.

ಆದರೆ ಬುದ್ಧಿಯಾಗಲಿ ಭಾವನಾವೃತ್ತಿಯಾಗಲಿ ನೇರವಾಗಿ ಆತನ ಕರ್ಮವನ್ನು ನಿರ್ಧರಿಸಕೂಡದು. ಅಥವಾ ಅದಕ್ಕೆ ಅಡ್ಡ ಬರಲಿಕ್ಕಾಗದು. ಬುದ್ಧಿಯು ವಿಚಾರದ ಸಲುವಾಗಿಯೂ ಚಿತ್ತವು ಭಾವನಾವೃತ್ತಿಯ ಸಲುವಾಗಿಯೂ ಇವೆ. ಶುದ್ಧಸ್ಥಿತಿಯಲ್ಲಿ ಕಾರ್ಯ ದೊಂದಿಗೆ ಅವುಗಳಲ್ಲೊಂದರದೂ ಏನೂ ಕೆಲಸವಿಲ್ಲ.

ಬೌದ್ಧಿಕ ಅಸುರನು ತನ್ನ ಕಾರ್ಯವನ್ನು ತನ್ನ ತರ್ಕ ಇಲ್ಲವೆ ತನ್ನ ಆದರ್ಶಾನುಸಾರವಾಗಿ ನಿರ್ಧರಿಸುವನು; ಭಾವನಾವೃತ್ತಿಯ ಅಸುರನು ತನ್ನ ಅನುಭೂತಿಗಳಿಂದ ಅದನ್ನು ನಿರ್ಧರಿಸುವನು. ಆದರೆ ಶುದ್ಧನು ವಿಜ್ಞಾನದಲ್ಲಿರುವ ದೈವೀಸತ್ಯೆಯಿಂದ ಸಾಗಿ ಬರುವ ಸರ್ವೋಚ್ಚಪ್ರೇರಣಾನುಸಾರವಾಗಿ ಕರ್ಮನಿರ್ಧಾರಣವನ್ನು ಮಾಡು ವನು. ಜನರು ಯಾವಾಗಲೂ **ಆದೇಶ**ವೆಂದು ಅನ್ನುತ್ತಿರುವುದು ಇದೇ. ಈ ಬಗೆಯ ಆದೇಶಗಳು ಬರುವ ವಿಷಯದಲ್ಲಿ ಶುದ್ಧನಿಗೆ ಮಾತ್ರವೇ ಸಂಬುಗೆಯಿರುವದು. ಅಶುದ್ಧಯೋಗಿಯು ಯಾವಾ ಗಲೂ ತನ್ನ ಸ್ವಂತದ ಸಿದ್ಧಾಂತ, ಕಲ್ಪನೆ, ಭಾವನೆಗಳನ್ನೇ ವಾಸನೆ ಯನ್ನು ಸಹ–ಆದೇಶವೆಂದು ಭ್ರಮಿಸುತ್ತಾನೆ.

ಆದುದರಿಂದ ಯೋಗಿಯು ಮಾಡಬೇಕಾದುದೇನೆಂದರೆ ಚಿತ್ತದ ನಿಮ್ನಸ್ತರದ ಕ್ರಿಯೆಯನ್ನು ಅಥವಾ ಪುರಾತನ ಸಂಸ್ಕಾರಗಳನ್ನು, ಹಿಂದಿನ ನನ್ನ ಉಪನ್ಯಾಸದಲ್ಲಿ ಬಣ್ಣಿಸಿದಂತೆ ಮನವನ್ನು ನಿಶ್ಚಲಗೊಳಿ ಸುವುದರ ಮೂಲಕ ಕಿತ್ತಿಹಾಕಬೇಕು; ಸಹಜಾತ ಬುದ್ಧಿ ( Instinctive thought ) ಅಥವಾ ವಿಚಾರೋದ್ದೀಪನವನ್ನೂ ಅದೇ ಉಪಕರಣ ದಿಂದಲೇ ಕಿತ್ತಿಹಾಕಬೇಕು; ಉದ್ದೀಪನಗಳನ್ನು ಸ್ತಬ್ಧಗೊಳಿಸುವದಕ್ಕೂ ಭಾವನಾವೃತ್ತಿಗಳನ್ನು ಶುದ್ಧಗೊಳಿಸುವುದಕ್ಕೂ ಸಂಕಲ್ಪ ಶಕ್ತಿಗೆ ಆಸುವು

ಮಾಡಿಕೊಡುವುದರ ಮೂಲಕ **ಭಾವನಾವೇಗದಿಂದ ಕಾರ್ಯ ಮಾಡುವ ಪರಿಪಾಠವನ್ನು ಕಿತ್ತಿಹಾಕತಕ್ಕದ್ದು. ಹೃದಯದಲ್ಲಿ ಅಲ್ಲೋಲಕಲ್ಲೋಲವನ್ನೆಬ್ಬಿಸುವ ಭಾವನೆಗಳ ಹಾಗೂ ವಿಕಾರಗಳ ಮೂಲಕ ಅಂಥಭಾವದಿಂದ ಹೊರಡುವ ಮಾತುಗಳನ್ನೂ, ಕೃತಿಗಳನ್ನೂ ಸಂಕಲ್ಪಶಕ್ತಿಯಿಂದ ನಿರೋಧಿಸತಕ್ಕದ್ದು.**

ಭಾವನಾವೃತ್ತಿಯು ಆಗ ಶಾಂತವಾಗುವದು. ಪ್ರಚಂಡವಾಗಿ ಅಲ್ಲೋಲಕಲ್ಲೋಲ ಮಾಡುವುದನ್ನು ಬಿಟ್ಟು ಸಾಗರದ ತೆರೆಯು ಸಾಗರದೊಳಗೇ ಸ್ತಬ್ಧವಾಗುವಂತೆ ಭಾವನೆಗಳು ಶಾಂತದಶಾಪ್ರಾಪ್ತವಾಗಿ ಅಲೆದಾಡುವ ರೂಢಿಗೆ ಬರಬೇಕು. ಕರ್ಮಪ್ರವೃತ್ತಿಯಲ್ಲಿ ತಮ್ಮ ತೃಪ್ತಿಯನ್ನು ಹುಡುಕಲೆಳಸದೆ, ಜೀವನವನ್ನಾಗಲಿ ಆದರ್ಶವನ್ನಾಗಲಿ ಆಳುವುದಕ್ಕೆ ಹಾರೈಸದೆ ಕೇವಲ ಅಸ್ತಿತ್ವಮಾತ್ರದಲ್ಲಿಯ ಸಂತೃಪ್ತಿಯನ್ನು ಅನುಭವಿಸುವ ಇಂಥ ಶಾಂತತರಂಗಗಳೇ ಶುದ್ಧೀಕರಣಹೊಂದಿದ ಭಾವನಾವೃತ್ತಿಗಳು. ಮೇಲಕ್ಕೆ ಬುದ್ಧಿಯತನಕ ಏರಿ ಹೋಗಿ ವಿಚಾರ ಹಾಗು ಆಶಯಗಳನ್ನು ಹರಿತಗೊಳಿಸುವ ಹಾಗೂ ಹೊರಗಡೆಗೆ ವಾಣಿ ಮತ್ತು ಕರ್ಮಗಳಲ್ಲಿ ಸಂಚರಿಸುವ ಭಾವನಾವೃತ್ತಿಗಳು ಅಶುದ್ಧ ಪ್ರವೃತ್ತಿಗಳಾಗಿವೆ.

ಚಿತ್ತಸ್ಥ ಭಾವನಾವೃತ್ತಿಗಳು ಕೇವಲ ರಸಭೋಗಾರ್ಥವಾಗಿ ಮಾತ್ರವೇ ಇವೆಯೆಂದು ನಾನು ತಿಳಿಯುತ್ತೇನೆ. ಕರ್ಮವು ಸರ್ವೋಚ್ಚವಾದೊಂದು ತತ್ವಕ್ಕೆ ಅಧೀನವಾಗಿರತಕ್ಕದ್ದು.

ಪುನಃ ಹೇಳುವದೇನೆಂದರೆ ಸಂಕಲ್ಪಶಕ್ತಿಯೇ ಹೃದಯವನ್ನು ಶುದ್ಧಗೊಳಿಸತಕ್ಕದ್ದು, ಆಳತಕ್ಕದ್ದು ಹಾಗೂ ಅಧೀನವೀಕರಿಸತಕ್ಕದ್ದು. ಜ್ಞಾನವು ಮೊದಲಿಗೇ ಕ್ರಿಯಾಶೀಲವಾಗಿದ್ದರೆ ಹಾಗೂ ಮನವು ಶಾಂತವಾಗಿದ್ದರೆ ಮಾತ್ರವೇ ಸಂಕಲ್ಪಶಕ್ತಿಗೆ ಇದನ್ನು ಸಾಧಿಸಲು ಉತ್ತಮವಾದ ಸಂದರ್ಭವು ಸಿಕ್ಕುತ್ತದೆ. ಶಾಂತಮನವೊಂದಾದರೆ ಹೃದಯಶುದ್ಧಿಯು ಸುಲಭವಾಗಿಬಿಟ್ಟಿತೆಂದೇ ಅದರ ಅರ್ಥ.

---

# ೭ ಪ್ರಾಣ

ಪ್ರಕರಣೋಪಕ್ರಮಣಿಕೆ:—

ಮನ, ಪ್ರಾಣ, ದೇಹ (*Mind, Life, Body*) ಅಥವಾ ಮಾನಸಾತ್ಮಕ, ಪ್ರಾಣಾತ್ಮಕ, ಭೌತಿಕ (*Mental, Vital, Physical*) ಎಂದು ನಮ್ಮ ಜಾಗೃತ ಪ್ರಜ್ಞೆಯು ಮೂರು ಸ್ತರಗಳುಳ್ಳದ್ದಾಗಿದೆಯಷ್ಟೆ? ಬುದ್ಧಿ, ಮನ, ಚಿತ್ತ, ಪ್ರಾಣ, ದೇಹ ಎಂಬಿವೈದೂ ಮೇಲ್ಕಾಣಿಸಿದ ಮೂರರಲ್ಲೇ ಅಡಕವಾಗಿವೆಯೆಂಬುದೂ ತಿಳಿದ ವಿಷಯವೇ.

ಮನ-ಪ್ರಾಣ-ದೇಹಗಳೆಂಬೀ ತ್ರಯಿಯಲ್ಲಿ ಪ್ರಾಣ ದಿಂದಲೇ ಸಮಸ್ತ ಪ್ರಾಣಿಕೋಟಿಗೆ ಜಡಜಗತ್ತಿಗಿಂತ ಹೆಚ್ಚಿನದೊಂದು ವೈಶಿಷ್ಟ್ಯವು ಪ್ರಾಪ್ತವಾಗಿದೆ. ಪ್ರಾಣ ವಿಲ್ಲದೆಲ್ಲ ಜಡ; ಜಡವಲ್ಲದ್ದೆಲ್ಲ ಪ್ರಾಣ. ಪ್ರಾಣದ ಮಹತ್ವ ಇಷ್ಟಿದೆ. ಪ್ರಾಣವಿಲ್ಲದಲ್ಲಿ ಜೀವನವಿಲ್ಲ. ಜೀವನ ವಿಲ್ಲದಲ್ಲಿ ಪ್ರಾಣವಿಲ್ಲ. ಪ್ರಾಣಕ್ಕೂ ಜೀವನಕ್ಕೂ ಇಷ್ಟು ಸಂಬಂಧ. ಜನನ ಮರಣ ರಾಹಿತ್ಯವೆ ಮುಖ್ಯ ಲಕ್ಷಣ ವಾಗಿರುವ ಪುರಾತನರ ಮೋಕ್ಷವನ್ನು ಪರಿತ್ಯಜಿಸಿ ಕೇವಲ ವಾಗಿ ಜೀವನದ ದೈವೀ ಸಮೃದ್ಧಿಯನ್ನೇ ಧ್ಯೇಯವಾಗಿ

ಇಟ್ಟುಕೊಂಡಿರುವ ಪೂರ್ಣಯೋಗದಲ್ಲಿ ಬಾಳುವೆಯ ಪ್ರಧಾನಕ್ಷೇತ್ರವಾಗಿರುವ ಪ್ರಾಣದ ಪೂರ್ಣತೆಗೂ ಶುದ್ಧಿಗೂ ಅತ್ಯಂತ ಮಹತ್ವವಿರಲೇಬೇಕಷ್ಟೆ?

ಒಂದು ರೀತಿಯಿಂದ ಪ್ರಾಣವೇ ಶಕ್ತಿಯ ಬಾಹ್ಯ ಸ್ವರೂಪವು. ವಿಜ್ಞಾನದಲ್ಲಿ ಅಭಿನ್ನವಾಗಿರುವ ಶಕ್ತಿ-ಜ್ಞಾನಗಳೇ ಕೆಳಗಿನ ಜಡ ಆವರಣದಲ್ಲಿ ಇಬ್ಭಾಗವಾಗಿ ಪ್ರಾಣ-ಬುದ್ಧಿಗಳೆಂದೆನಿಸಿಕೊಂಡವು. ೧ ಸತ್, ೨ ಚಿತ್, ೩ ಆನಂದ; ೧ ಜ್ಯೋತಿ, ೨ ಶಕ್ತಿ, ೩ ಶಾಂತಿ; ೧ ಸತ್ವ ೨ ರಜ, ೩ ತಮ. ಈ ತ್ರಯಿಗಳು ಒಂದರದೇ ಕೆಳ ಕೆಳಗಿನ ರೂಪಗಳು. ಕೊನೆಯ ಸತ್ವ ರಜ ಸ್ತಮಗಳ ಘನರೂಪಗಳೇ ಬುದ್ಧಿ-ಪ್ರಾಣ-ಅನ್ನಗಳು. ೧ ಸತ್, ಜ್ಯೋತಿ, ಸತ್ವ; ೨ ಚಿತ್, ಶಕ್ತಿ, ರಜ; ೩ ಆನಂದ, ಶಾಂತಿ, ತಮ ಈ ಗುಂಪುಗಳು ಗುಣಸಾಮ್ಯತೆಯುಳ್ಳವುಗಳಾಗಿವೆ. ಅರ್ಥಾತ್ ಪ್ರಾಣವು ರಜೋಗುಣದ ನೆಲೆವೀಡು. ರಜೋ ಗುಣದಿಂದಲೇ ಸಮಸ್ತ ರಚನಾ ಪ್ರಪಂಚ. ಪೂರ್ಣಯೋಗವು ಜಾಗತಿಕ ಜೀವನದಲ್ಲಿ ಸ್ವರ್ಗೀಯ ರಚನೆಯನ್ನುಂಟುಮಾಡುವುದಕ್ಕೆ ಪ್ರತಿಜ್ಞಾಬದ್ಧವಾಗಿರುವದರಿಂದ ನವ ನಿರ್ಮಾಣಕ್ಕೆ ಉಪಯುಕ್ತವಾಗುವಂತೆ ಅದರ ಆಯುಧವನ್ನು ಅಂದರೆ ಪ್ರಾಣವನು ಹರಿತಗೊಳಿಸಿಕೊಳ್ಳದೆ ಅದಕ್ಕೆ ನಿರ್ವಾಹವೇ ಇಲ್ಲ.

ಈಗೊಂದು ಶತಮಾನದಿಂದಲೂ ಪಾಶ್ಚಾತ್ಯ ತತ್ವಜ್ಞಾನವೆಲ್ಲಾ ಇದೇ ದಿಕ್ಕಿಗೆ ಓಡತೊಡಗಿದೆ. "ಶಕ್ತಿ ಬೇಕು ಶಕ್ತಿ" ಎಂಬುದು ಅವರ ಕೂಗು. ಆದರೆ ಅವರು ಪ್ರಾಣಶಕ್ತಿಯನ್ನು ಇದ್ದಕ್ಕಿದ್ದಂತೆ ಬಲಪಡಿಸಬೇಕೆನ್ನುತ್ತಾರೆ. ಗುರು ಅರವಿಂದರಿಗೂ ಇವರಿಗೂ ಇಲ್ಲಿಯೇ ಭೇದ ಬರುತ್ತದೆ. ಯೋಗೀಶ್ವರ ಅರವಿಂದರು ವಿಜ್ಞಾನದಲ್ಲಿರುವ ಅಘಟಿತ ಘಟನ ಪಟೀಯಸೀ ಶಕ್ತಿಯನ್ನು ಪ್ರಕಟಗೊಳಿಸಿಕೊಂಡು ಅದಕ್ಕೆ ಪ್ರಾಣಶಕ್ತಿಯು ಅವಿರೋಧವಾಗದಂತೆ ಏರ್ಪಾಟು ಮಾಡಬೇಕೆಂದು ವಿಧಿಸುತ್ತಾರೆ. ವಿಜ್ಞಾನಶಕ್ತಿಯೂ ಪ್ರಾಣಶಕ್ತಿಯೂ ಅಭಿನ್ನದಶಾಪ್ರಾಪ್ತವಾಗುವವರೆಗೆ ಪ್ರಾಣದ ಕೆಳಗಿರುವ ಭೌತಿಕದಲ್ಲಿ ಚಿರಸ್ಥಾಯಿಯಾದ ಯಾವ ಪರಿವರ್ತನವನ್ನೂ ಉಂಟುಮಾಡಲಿಕ್ಕೆ ಸಾಧ್ಯವಿಲ್ಲವೆಂದು ಅವರು ನಿರ್ಧಾರವಾಗಿ ಘೋಷಿಸುತ್ತಾರೆ.

"ವ್ರಯಿಲ್‌ಪಾವರ್" *Will-power* (ಇಚ್ಛಾಶಕ್ತಿ) ಎಂಬ ಮಾತು ಈಗ ಎಲ್ಲೆಲ್ಲಿಯೂ ಕೇಳಬರುತ್ತದೆ. ಗುರು ಅರವಿಂದರ ಪ್ರಸ್ತುತ ಗ್ರಂಥದ ಘೋಷಣೆಯೂ ಅದೇ ಆಗಿದೆ. ಆದರೆ ರೂಢಿಯಲ್ಲಿರುವುದರ ಅರ್ಥವೂ ಇವರ ಅರ್ಥವೂ ಭಿನ್ನಭಿನ್ನವಾಗಿವೆ. "ಈ ವ್ರಯಿಲ್ ಪಾವರ್" ಎಂಬುದು ಒಟ್ಟಾರೆ ಶಕ್ತಿಯೆಂಬುದರದೇ

ಒಂದು ರೂಪವಾದರೂ ಅದು ಮಾನವನ ಸಮಸ್ತ ಆಧಾರದೊಳಗೆ ಎಲ್ಲೆಡೆಯಲ್ಲಿ ಒಂದೇ ರೂಪದಲ್ಲಿರುವ ದಿಲ್ಲ. ಪ್ರಾಣಶಕ್ತಿ, ಮಾನಸಶಕ್ತಿ, ಆತ್ಮಶಕ್ತಿ *( Vital will, mentol will, spiritual will )* ಎಂದು ಅದು ವಿವಿಧವಾಗಿರುತ್ತದೆ. ಅದಮ್ಯಉತ್ಸಾಹವೇ ಪ್ರಾಣಶಕ್ತಿ, ಬೌದ್ಧಿಕ ಆತ್ಮವಿಶ್ವಾಸವೇ ಮಾನಸಶಕ್ತಿ, ತಪೋಬಲವೇ ಆತ್ಮಶಕ್ತಿ. ಪಾಶ್ಚಾತ್ಯರು ಪ್ರಾಣಶಕ್ತಿ ಹಾಗೂ ಮಾನಸ ಶಕ್ತಿಯ ಭಕ್ತರು. ಶ್ರೀ ಅರವಿಂದರು ತಪಶ್ಶಕ್ತಿಯ ಡಂಗುರಿಗರು. ದೇವಾಧಿದೇವನು ಯಾವ ಶಕ್ತಿಯಿಂದ ಕ್ಷಣಮಾತ್ರದಲ್ಲಿ ವಿಶ್ವಕಾರ್ಯಗಳನ್ನು ಸಾಧಿಸುವನೋ ಆತನ ಆ ದಿವ್ಯಸಂಕಲ್ಪವೇ ಮಾನವನ ವಿಜ್ಞಾನದಲ್ಲಿ ತಪಶ್ಶಕ್ತಿಯಾಗಿರುತ್ತದೆ. ಅಂತಲೇ ಇದಕ್ಕೆ "ಸಂಕಲ್ಪ ಶಕ್ತಿ"ಯೆಂದೂ ಉಪನಿಷತ್ತಿನ ಋಷಿಗಳ ವಾಣಿಯಲ್ಲಿ "ಕ್ರತುಶಕ್ತಿ"ಯೆಂತಲೂ ಅನ್ನಲಾಗುವದು.

ಗುರುದೇವನ ಗಂಭೀರ ಘೋಷಣೆಯಿದು:— "ನಿಮ್ಮ ಬುದ್ಧಿಗೆ ತೊಡಕೆನಿಸುವಂತೆ ತೋರಿಕೆಯಲ್ಲಿ ಪರಸ್ಪರ ವಿರೋಧವಾಗಿ ಕಾಣುವ ಎರಡು ವಿಧದ ಮಿಸುಕುಗಳು ಒಂದೇ ಪ್ರಜ್ಞೆಯ ಎರಡು ತುದಿ ಗಳಾಗಿದ್ದು ಪ್ರಸ್ತುತದಲ್ಲಿ ಅವು ಪರಸ್ಪರ ಭಿನ್ನತಾ ಪ್ರಾಪ್ತವಾಗಿದ್ದರೂ ನಾವು ಭರವಸ ಪಡುತ್ತಿರುವಂತೆ

ಜೀವನಶಕ್ತಿಯು (*Life power*) ಹೆಚ್ಚುಹೆಚ್ಚಾಗಿ ಪೂರ್ಣ ಕ್ರಿಯಾಶೀಲವಾದರೆ, ಸಿದ್ಧತಾಪ್ರಾಪ್ತವಾದರೆ, ರೂಪಾಂತರಿತವಾದರೆ ಪುನಃ ಅವು ಕಲಿತು ಬಿಡಬಲ್ಲವು. ದೈವೀಶಕ್ತಿಯು (*Divine power*) ಜಡಜಗತ್ತು ಹಾಗೂ ಭೌತಿಕ ಪ್ರಕೃತಿಯ ಮೇಲೆ ನಡಿಸಲಿರುವ ಸಕಲಕಾರ್ಯಗಳಿಗೆ ಪ್ರಾಣಸ್ಥ ಜೀವನಶಕ್ತಿಯು (*Life force in the vital*) ಅಪರಿಹಾರ್ಯವಾದ ಆಯುಧವಾಗಿದೆ. ಆದುದರಿಂದ ದೈವೀಶಕ್ತಿಗೆ ಯಾವಾಗ ಈ ಪ್ರಾಣವು ರೂಪಾಂತರಿತವೂ ಪರಿಶುದ್ಧವೂ ಬಲಿಷ್ಠವೂ ಆದ ಆಯುಧವಾಗುವದೋ ಆಗ ಮಾತ್ರವೇ ದೈವೀಜೀವನವು ಶಕ್ಯವಾಗಬಲ್ಲದು. ಆಗ ಮಾತ್ರವೇ ಭೌತಿಕ ಪ್ರಕೃತಿಯ ವಿಜಯಿ ರೂಪಾಂತರವೂ, ಬಾಹ್ಯಜಗತ್ತಿನ ಮೇಲೆ ಅಬಾಧಿತ ಹಾಗೂ ಪರಿಪೂರ್ಣ ದೈವೀಕ್ರಿಯೆಯೂ ಸಂಭವಿಸಬಲ್ಲವು. ಸದ್ಯದ ನಮ್ಮ ಇಂದ್ರಿಯಗಳಿಂದ ಇಂಥ ಯಾವ ಕೃತಿಯೂ ಸಾಧ್ಯವಿಲ್ಲ........ಆದರೆ ಒಂದು ಮಾತು ಯಾವಾಗಲೂ ಲಕ್ಷ್ಯದಲ್ಲಿಡುವಂತಹದಾಗಿದೆ, ಅದೇನೆಂದರೆ—ಮಾನವನ ಪ್ರಾಣಾತ್ಮಕ ಸತ್ತೆಯೂ, ಜೀವನಶಕ್ತಿಯೂ ದೈವೀಜ್ಯೋತಿಯಿಂದ ಎಷ್ಟು ಅಗಲಿಬಿಟ್ಟಿರುವವೆಂದರೆ ಅವುಗಳನ್ನು ಯಾವದಾದರೂ ಒಂದು ದೈವೀ ಅಥವಾ ಅದೈವೀ ಶಕ್ತಿಯು (*Divine or undivine*) ಆಕ್ರಮಿಸಲಿಕ್ಕೆ ಶಕ್ಯವಿದೆ........ವೃದ್ಧಿಂಗತವಾದ

ಪ್ರಾಣಬಲವು ದೇವತಾಶಕ್ತಿಗಳಿಗಾಗಲಿ ಆಸುರಿಕ ಶಕ್ತಿಗಳಿಗಾಗಲಿ ಆಯುಧವಾಗುವ ಸಂಭವವು ಸರ್ವದಾ ಇರುತ್ತದೆ. ಪ್ರಕೃತಿಯಲ್ಲಿ ಸ್ಥಾಯಿಯಾದ ಮಧ್ಯವರ್ತೀ ನಿಯಂತ್ರಣವಿಲ್ಲದಿದ್ದರೆ ಅದರ ಕ್ರಿಯೆಯು ಈ ಪ್ರತಿ ಯೋಗೀ ಶಕ್ತಿಗಳ ಸಮ್ಮಿಶ್ರಣದಿಂದ ಗೊಂದಲಕ್ಕಿಟ್ಟು ಬಿಡುತ್ತದೆ. ಒಂದು ಬಗೆಯ ಕ್ರಮವಿಲ್ಲದ ಹೊಯ್ದಾಟದಲ್ಲಿ ಅದು ಈಗೊಂದನ್ನೂ ಆಗೊಂದನ್ನೂ ಆರಾಧಿಸತೊಡಗಬಲ್ಲದು. ಆದುದರಿಂದ ನಿಮ್ಮಲ್ಲಿ ವಿಪುಲ ಪ್ರಾಣಶಕ್ತಿಯು ಕ್ರಿಯಾಶೀಲವಾಗುವದಿಷ್ಟೇ ಏನೂ ದೊಡ್ಡ ಮಾತಲ್ಲ. ಅದು ಸರ್ವೋಚ್ಚ ಪ್ರಜ್ಞೆಯೊಂದಿಗೆ ಸಂಬಂಧಿತವಾಗಬೇಕು; ಸತ್ಯವಾದ ನಿಯಂತ್ರಣಕ್ಕೆ ಅರ್ಪಿತವಾಗಬೇಕು; ದೈವೀ ಆಡಳಿತಕ್ಕೆ ಅದು ಅಧೀನವಾಗಲಿಕ್ಕೆಬೇಕು....ಇಲ್ಲದಿದ್ದರೆ ಪ್ರಾಣಬಲವು ತನ್ನಷ್ಟಕ್ಕೆ ತಾನೇ ಏನೂ ಗತಿಗಾಣಲಾರದು."

ನಾವು ಇದಿಷ್ಟು ಪ್ರಾಣದ ಕಡೆಗೆ ಬರುವೆ. ಅದು ಮಾನವನಲ್ಲಿ ಬಲ ಅಥವಾ ಚೇತನದ ವಸ್ತುವಾಗಿದ್ದು ಸೂಕ್ಷ್ಮದೇಹದೊಳಗೆ ಮನ ಹಾಗೂ ಚಿತ್ತದ ಕೆಳಗಡೆಗೆ ಇರುತ್ತದೆ; ಸ್ಥೂಲದೇಹದಲ್ಲಿ ನಾಭಿಗೆ ಸಂಯೋಜಿತವಾಗಿರುತ್ತದೆ.

ಅದರಲ್ಲಿ ಸೂಕ್ಷ್ಮಪ್ರಾಣ ಹಾಗೂ ಸ್ಥೂಲಪ್ರಾಣಗಳನ್ನು ಕುರಿತು ನಾವು ವಿವೇಚಿಸಲುಬೇಕು. ಮೊದಲಿನದು ಯೋಗಗ್ರಂಥಗಳಲ್ಲಿ ವಿಧಿಸಿದಂತೆ ಸೂಕ್ಷ್ಮದೇಹದ ಮಜ್ಜಾತಂತುಮಂಡಲದೊಳಗೆ

( Nervous system ) ಸಂಚರಿಸುತ್ತಿರುತ್ತದೆ; ಕೊನೆಯದು ಸ್ಥೂಲ ದೇಹದ ಮಜ್ಜಾತಂತುಮಂಡಲದೊಳಗೆ. ಇವೆರಡೂ ನಿಕಟವಾಗಿ ಪರಸ್ಪರ ಸಂಬಂಧಿತವಾಗಿದ್ದು ಯಾವಾಗಲೂ ಒಂದರ ಮೇಲೊಂದು ಕಾರ್ಯವನ್ನೆಸಗುತ್ತವೆ.

ಪ್ರಾಣವು ಭೌತಿಕ ಹಾಗೂ ಮಾನಸಿಕ ಮಾನವನ ಮಧ್ಯಸ್ಥ ಕೀಲಕವಾಗಿದೆ. (ಅರ್ಥಾತ್–ಮನ ಹಾಗೂ ಸ್ಥೂಲ ಇವೆರಡರ ಬೆಸಿಗೆಯನ್ನು ಮಾಡುವಂತಹದಾಗಿದೆ.) ಆದರೆ ಯೋಗಶಾಸ್ತ್ರಕ್ಕೂ ಯುರೋಪಿಯನ್ನರ ಭೌತಿಕಶಾಸ್ತ್ರಕ್ಕೂ ಯೋಗ ತಾಳುಮೇಳು ಹಾಕುವುದಕ್ಕೆ ಹಾಗೂ ಯೌಗಿಕ ನಾಡಿಗಳನ್ನೂ ಚಕ್ರಗಳನ್ನೂ ಸ್ಥೂಲದೇಹದಲ್ಲಿ ಪರಿಶೋಧಿಸುವುದಕ್ಕೆ ಪ್ರಯತ್ನಿಸುವವರ ತಪ್ಪು ತಡವರಿಕೆಗಳನ್ನು ಕುರಿತು ನಾನಿಲ್ಲಿ ಎಚ್ಚರಿಕೆ ಕೊಡಬೇಕಾಗಿದೆ. ಅವು ಇಲ್ಲಿ ನಿಮಗೆ ಲಭಿಸಲಾರವು. ಸ್ಥೂಲದೇಹದ ಮಜ್ಜಾತಂತುಮಂಡಲ ದಲ್ಲಿ ಚಕ್ರಗಳಿಗೆ ಸರಿಹೊಂದುವಂಥ ಕೆಲವು ಸಂವಾದೀ ಕೇಂದ್ರಗಳಿ ದ್ದುದೇನೋ ನಿಜ. ಹಾಗಿಲ್ಲದಿದ್ದರೆ ಹಠಯೋಗದ ಅಸ್ತಿತ್ವವೇ ಉಂಟಾಗುವುದು ಅಶಕ್ಯವಾಗುತ್ತಿತ್ತು. ಆದರೂ ಈ ಕೇಂದ್ರಗಳು ಚಕ್ರಗಳಲ್ಲ.

**ಯುರೋಪಿಯನ್ನರು ಜ್ಞಾನದ ತಮ್ಮ ಸ್ವಂತದ ಶಾಖೆಯಲ್ಲಿ ತಜ್ಞರಿದ್ದಾರೆ. ಆ ವಿಷಯದಲ್ಲಿ ಅವರಿಂದ ಕಲಿತುಕೊಳ್ಳುವುದಕ್ಕೆ ನೀವು ಅನುಮಾನಿಸುವ ಅಗತ್ಯವಿಲ್ಲ. ಆದರೆ ದೇವನ ವಿಷಯದಲ್ಲಿ ನೀವು ನಿಮ್ಮ ಸರ್ವೋಚ್ಚ ಜ್ಞಾನವನ್ನು ಅವರ ಶಕ್ತಿಗೆ ಅಡಿವೆರಗು ಮಾಡಬೇಡಿರಿ.** ಅದರಿಂದ ನೀವು ಅತ್ಯಂತ ಭಯಾನಕವಾದ ಗೊಂದಲವನ್ನು ಮಾತ್ರ ಹುಟ್ಟಿಸಿಬಿಡುವಿರಿ. ಮೊದಲಿಗೆ ನಿಮ್ಮ ಸರ್ವೋಚ್ಚಜ್ಞಾನವನ್ನು ವಿಕಾಸ ಗೊಳಿಸಿಕೊಳ್ಳಿರಿ. ಆಮೇಲೆ ಅವರ ವಿದ್ಯೆಗಳನ್ನು ಅಭ್ಯಸಿಸಿರಿ. ಆಗ ಅವು ತಮ್ಮ ನಿಜಸ್ಥಾನದಲ್ಲಿ ಉಳಿದುಕೊಳ್ಳುವವು.

ಮುಖ್ಯತಃ ನಾನು ಲಕ್ಷಿಸುತ್ತಿರುವುದು ಸೂಕ್ಷ್ಮ ಪ್ರಾಣವನ್ನು ಕುರಿತು. ಯಾಕೆಂದರೆ ಸ್ಥೂಲಪ್ರಾಣದ ಸಂಬಂಧವು ಅಂತಃಕರಣಕ್ಕಿಂತ ಹೆಚ್ಚಾಗಿ ಅನ್ನಂ ಅಥವಾ ಭೌತಿಕದೊಡನೆ ಇರುವದು. ಆದುದರಿಂದ ನಾನು 'ಅನ್ನಂ' ಎಂಬುದರ ಜೊತೆಗೆ ಇದರ ವಿಷಯದಲ್ಲಿ ಹೇಳುವೆನು.

ಸೂಕ್ಷ್ಮ ಪ್ರಾಣವು ವಾಸನಾಕ್ಷೇತ್ರವಾಗಿದೆ. ಯೋಗಿಗೆ ಅದರ ಶುದ್ಧೀಕರಣದ ಮಹತ್ವವು ಇಷ್ಟೇ ಇದೆಯೆಂದು ಹೇಳಲಿಕ್ಕೆ ಬಾರದು. ವಾಸನಾಮುಕ್ತರಾಗುವವರೆಗೆ ಯಾವುದನ್ನೂ ನೀವು ಮುಗಿತಾಯ ಗೊಳಿಸಿದಂತಾಗಲಾರದು. ಅಂತಲೇ ಗೀತೆಯು "ವಾಸನೆಯನ್ನೋಡಿಸು" ಎಂದು ಹೇಳುತ್ತದೆ. ಜ್ಞಾನವನ್ನು ಪಡೆದು ಮನವನ್ನು ಸ್ತಬ್ಧಗೊಳಿಸುವುದಕ್ಕೆ ಮತ್ತು ಭಾವನಾವೃತ್ತಿಗಳನ್ನು ಶುದ್ಧಗೊಳಿಸುವುದಕ್ಕೆ ನಿಮ್ಮ ಸಂಕಲ್ಪಶಕ್ತಿಯನ್ನು ಪ್ರಯೋಗಿಸುವುದನ್ನು ನೀವು ಕಲಿತುಕೊಳ್ಳುವವರೆಗೆ ವಾಸನೆಯನ್ನು ಎಷ್ಟೂ ಹೊಡೆದೋಡಿಸಲಾರಿರಿ.

ನೀವು ಅದನ್ನು **ಸಂಯಮ**ದಿಂದ ಓಡಿಸಬಹುದು; ಅಥವಾ **ನಿಗ್ರಹ**ದಿಂದ ದಂಡಿಸಬಹುದು. ಆದರೆ ಕೊನೆಗೆ ಇದು ನಿಷ್ಪ್ರಯೋಜಕ. ಯಾಕೆಂದರೆ ಅದು ಹಿಂದಿರುಗಿ ಬರುವದು. "ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ?" ಪ್ರಾಣಿಗಳು ಪ್ರಕೃತಿಯ ಬೆನ್ನುಹಿಡಿದು ಸಾಗುತ್ತಿರುವವು, ಆದ್ದರಿಂದ ಬಲಾತ್ಕಾರದ ಪ್ರಯೋಜನವೇನು? ಆದರೆ ಇಷ್ಟು ಹೇಳಬಹುದು— ಅದರಿಂದ ತಾತ್ಕಾಲಿಕ ಫಲವು ಕಂಡುಬರುತ್ತದೆ. ಆದರೂ ನಿಗ್ರಹಿಸಲ್ಪಟ್ಟ ವಾಸನೆಗಳು ಸೇಡುತೀರಿಸಿಕೊಳ್ಳುವವರಂತೆ ಮುಂಚಿನದಕ್ಕಿಂತ ಹೆಚ್ಚು ಉಗ್ರತೆಯಿಂದ ಹಿಂದಿರುಗಿ ಬರುವವು. ಒಬ್ಬ ಮನುಷ್ಯನ ಸ್ವಯೊಳಗಿಂದ ಒಂದು ದೆವ್ವವನ್ನು ಹೊರಗೆ ಹೊರಡಿಸಲು ಅದು ತನಗಿಂತ ಕೆಟ್ಟವುಗಳಾದ ಏಳು ದೆವ್ವಗಳೊಂದಿಗೆ ಹಿಂದಿರುಗಿ ಬಂದಿತೆಂದು ಕ್ರಿಸ್ತನು ಹೇಳಿದ ಸಾಮ್ಯದ ಅರ್ಥವೂ ಇದೇ ಆಗಿದೆ.

ಯಾಕೆಂದರೆ ವಸ್ತುಗಳ ಪ್ರಕೃತಿಯೇ ಹಾಗಿದೆ. ಅದು ಪಲ್ಲಟಿಸಲಿಕ್ಕಾಗದ ಪ್ರಕೃತಿಯೇ ಆಗಿದೆ. ಯಾಕೆಂದರೆ ಅಶುದ್ಧ ಭಾವನಾವೃತ್ತಿಯು ವಾಸನೆಯ ಹಿಂದೆ ಉಗ್ಗಡಿಸುತ್ತಿರುವದುಂಟು, ಅಶಾಂತ ಮನವು ಹಿಂದಿರುಗಿಬಂದ ವಾಸನೆಗೆ ತಂಗಲು ಸ್ಥಳವನ್ನೀಯುವದುಂಟು; ಮತ್ತು ಅಪ್ರಕಾಶಿತ ಬುದ್ಧಿಯು ಅದರ ಬೀಜವನ್ನು ಒಳಸೇರಿಸಿಕೊಂಡು ಪ್ರಥಮ ಪ್ರಸಂಗದಲ್ಲಿಯೇ ಅದನ್ನು ಮೊಳೆಯಿಸಲಿಕ್ಕೆ ಸಿದ್ಧವಿರುವದುಂಟು. ಆದ್ದರಿಂದ ಸಮಸ್ತ ಅಂತಃಕರಣವು ಶುದ್ಧವಾಗದಿದ್ದರೆ, ಅಥವಾ ನೂತನಹೃದಯವನ್ನೂ ನೂತನಬುದ್ಧಿಯನ್ನೂ ನೀವು ಸಂಪಾದಿಸದಿದ್ದರೆ ವಾಸನೆಯನ್ನು ನೀವು ಕಿತ್ತಿಹಾಕಲಾರಿರಿ; ಅದು ಹಿಂದುರುಗಿ ಬಂದು ಉಳಿದುಕೊಳ್ಳುತ್ತದೆ.

ಹೇಗಾದರೂ ಮಾಡಿ ಪ್ರಕಾಶಿತ ಬುದ್ಧಿಯು ಬಲಪಟ್ಟ ಸಂಕಲ್ಪಶಕ್ತಿಯ ಕ್ರಿಯೆಯನ್ನು ಬೆಳಗಿಸಿದರೆ ಮತ್ತು ಅದಕ್ಕೆ ಶುದ್ಧ ಹೃದಯದ ಬೆಂಬಲವುಂಟಾದರೆ ಆಗ ಅದು ವಾಸನೆಯನ್ನು ಸೂಕ್ಷ್ಮಪ್ರಾಣದಲ್ಲಿ ಕೆಡಹಿ, ಅಲ್ಲಿ ಅದರ ಸ್ವಸ್ಥಾನದೊಳಗೆ ಕಟ್ಟಿ ಹಾಕುತ್ತದೆ. ಆಗ ಅದು ನಿಶ್ಶೇಷವಾಗಿ ನಾಶವಾಗಬಲ್ಲದು.

ವಿಶುದ್ಧಬುದ್ಧಿಯುಂಟಾದರೆ ಆಗ ನೀವು ಇವೆಲ್ಲ ಇಂದ್ರಿಯಗಳ ವೈಶಿಷ್ಟ್ಯವನ್ನರಿಯಲು ಸಮರ್ಥರಾಗುವಿರಿ; ಹಾಗೂ ನಿಮ್ಮ ಸಮಸ್ತ ಮನೋವೃತ್ತಿಗಳನ್ನು ಅವವುಗಳ ಸ್ಥಳದಲ್ಲಿ ಸ್ಥಾಪಿಸುವಿರಿ. ಆಗ ವಾಸನೆಯನ್ನು ಪ್ರಾಣದಲ್ಲಿ ಬೇರ್ಪಡಿಸಿ ಇಡಲಿಕ್ಕಾಗುವದು; ಹೃದಯ-ಮನಗಳನ್ನು ಅದರ ಛಲಪೂರ್ಣವಾದ ಹಾವಳಿಗಳಿಂದ ತಪ್ಪಿಸಿ ಶುದ್ಧವಾಗಿಡಲಿಕ್ಕೆ ಶಕ್ಯವಾಗುವದು. ವಾಸನೆಗೆ ಚಿತ್ತಬುದ್ಧಿಗಳ ಆಶ್ರಯವು ಲಭಿಸಿದಾಗ ಮಾತ್ರವೇ ಅದು ಭಾವನಾವೃತ್ತಿಯ ವಿಕಾರಗಳನ್ನೂ ಜ್ಞಾನದ ದುರ್ವ್ಯಪರೀತ್ಯಗಳನ್ನೂ ಹುಟ್ಟಿಸಿಕೊಂಡು ಕಾರ್ಯಕಾರಿಯಾಗುವದು. ಯಾಕೆಂದರೆ ಇವೇ ಅದಕ್ಕೆ ಸಂಕಲ್ಪಶಕ್ತಿಯ ಮೇಲೆ ಹೇರಿಕೊಂಡು ಕೂತುಕೊಳ್ಳುವುದಕ್ಕೂ ಅಂತರ್ಬಾಹ್ಯಕ್ರಿಯೆಗಳ ಮೇಲೆ

ಪ್ರಭಾವವನ್ನು ಕುಳ್ಳಿರಿಸುವುದಕ್ಕೂ ಶಕ್ತಿಯನ್ನೀಯುವವು. ವಾಸನೆಯು ಒಂದು ತತ್ವದ ಅಥವಾ ಒಂದು ಆದರ್ಶದ ಇಲ್ಲವೆ ಒಂದು ಸಯುಕ್ತಿಕವೆಂದು ಪ್ರತಿಪಾದಿಸಲರ್ಹವಾದ ಭಾವನಾ ವೃತ್ತಿಯ ಸೋಗನ್ನು ಹಾಕಿಕೊಂಡಿತೆಂದರೆ ಆಗ ಮೇಲ್ತರಗತಿಯ ಮಾನವಪ್ರಾಣಿಯಲ್ಲಿ ಸಹ ಅದು ಅತ್ಯಂತ ಬಲಿಷ್ಠವಾಗಿ ಕೂತುಕೊಳ್ಳುವದು.

ಇದಲ್ಲದೆ ಸ್ಮರಣೆಯಲ್ಲಿಡಬೇಕಾದುದೇನೆಂದರೆ ದುಷ್ಟವಾಸನೆಗಳಂತೆ ಶಿಷ್ಟವಾಸನೆಗಳನ್ನು ಸಹ ತಳ್ಳಿಹಾಕಬೇಕಾಗಿದೆ. ಸರ್ವವಾಸನೆಗಳನ್ನು ದೂರಗೊಳಿಸಬೇಕಾಗಿದೆ. ಕೆಲವರು ನಿಮಗೆ–ಒಳ್ಳೆಯವುಗಳನ್ನು ಉಳಿಸಿಕೊಂಡು ಕೆಟ್ಟವುಗಳನ್ನು ದಬ್ಬಿರೆಂದು ಹೇಳಬಹುದು. ಆ ಹೊರಮಿಂಚಿನ ಆಜ್ಞೆಯ ಕಡೆಗೆ ಲಕ್ಷ್ಯವನ್ನು ಕೊಡಬೇಡಿರಿ. ನೀವು ಶಿಷ್ಟವಾಸನೆಗಳನ್ನು ದುಷ್ಟವಾಸನೆಗಳ ಉತ್ಪಾಟನದ ಸಲುವಾಗಿ ಒಂದು ಗೊತ್ತುವಳಿಯಿಂದ ಉಪಯೋಗಿಸಬಹುದು. ಆ ಕೆಲಸವಾದೊಡನೆಯೆ ಈ ಶಿಷ್ಟತರದವುಗಳನ್ನೂ ಕೂಡ ಮುಮುಕ್ಷುತ್ವದ ಹಾಗೂ ಈಶೈಕ್ಯದ ಒಂದು ವಾಸನೆಯಿಂದ ಹೊರದೂಡಬೇಕೆಂಬುದೇ ಆ ಗೊತ್ತುವಳಿಯು. ಕಟ್ಟಕಡೆಗೆ ಆ ಕೊನೆಯ ವಾಸನೆಯನ್ನೂ ಸಹ ಪರಿತ್ಯಜಿಸಿ ನೀವು ಸಂಪೂರ್ಣವಾಗಿ ಈಶಸಂಕಲ್ಪಕ್ಕೆ ನಿಮ್ಮನ್ನು ನೀಡಿಬಿಟ್ಟು ಅಂಥ ಆ ಮಹತ್ತಮವಾದ ಅಂತಿಮ ಸಾಧ್ಯದ ವಿಷಯದಲ್ಲಿಯೂ ಕೂಡ ತುಂಬಾ ನಿರಪೇಕ್ಷರೂ, ನಿಷ್ಕಾಮರೂ, ನಿಸ್ಪೃಹರೂ ಆಗಲಿಕ್ಕೆಬೇಕು. ಇಲ್ಲದಿದ್ದರೆ ನೀವು ಒಂದು ದುರ್ವರ್ತುಲದಲ್ಲಿ ಸುತ್ತಾಡುತ್ತಿರುವುದನ್ನು ಕಾಣುವಿರಿ. ಯಾಕೆಂದರೆ ಹೇಗಾದರೂ ನೀವು ವಾಸನೆಯನ್ನು ಉಳಿಸಿದ್ದಾದರೆ–ಅದು ಎಂಥಾ ಜಾತವಂಚಕವಿದೆಯೆಂದರೆ, ಕೊನೆಗೂ ನಿಮ್ಮ ಶತ್ರುಗಳಿಗೆ ಅದು ಬಾಗಿಲ ತೆರೆದುಕೊಡುವದು.

ದೆವ್ವ ತನ್ನ ಮನೆಗೆ ಹೊರಳಿ ಒಂದು ನೋಡಿದಾಗ ಸಮ್ಮಾರ್ಜನೆ ಮಾಡಿ ಅಲಂಕರಿಸಿದ ಮನೆಯು ಅದರ ಕಣ್ಣಿಗೆ ಬೀಳುತ್ತದೆ

ಅರ್ಥಾತ್ ದುಷ್ಟವಾಸನೆಗಳನ್ನೆಲ್ಲ ಪರಿಶುದ್ಧಗೊಳಿಸಿ ಶಿಷ್ಟವಾಸನೆಗಳಿಂದ ಶೃಂಗರಿಸಲಾದುದನ್ನು ಕಂಡು ಅದು ಕೂಡಲೆ ಒಳಸೇರಿಕೊಂಡು ಆ ಮನುಷ್ಯನ ಅಂತಿಮ ಅವಸ್ಥೆಯನ್ನು ಪೂರ್ವದಕಿಂತ ಹೀನತರವಾಗಿ ಮಾಡಿಬಿಡುತ್ತದೆ. ಆದುದರಿಂದ ಸಮಸ್ತವಾಸನೆಗಳನ್ನು–ಅವು ಶಿಷ್ಟತರವಾಗಿದ್ದರೂ ಸರಿ, ದುಷ್ಟತರವಾಗಿದ್ದರೂ ಸರಿ, ಮಧ್ಯಸ್ಥವಾಗಿದ್ದರೂ ಸರಿ–ನಿಶ್ಶೇಷವಾಗಿ ಹೊರದೂಡಬೇಕು.

ಪಾಪದಂತೆ ಪುಣ್ಯವನ್ನೂ ದಾಟು. ಬೇಡಿಗಳು ಅಪರಂಜಿಯ ಬಂಗಾರದವುಗಳಾದರೂ ಸರಿ, ಅವುಗಳ ಬಂಧನಕ್ಕೆ ಮರುಳಾಗಬೇಡ. ನಿನ್ನ ಮೇಲೆ ಬಾಧ್ಯಸ್ಥಿಕೆಯನ್ನು ಸಾಧಿಸುವವರು ದೇವತೆಗಳಾಗಿದ್ದರೂ ಸರಿ ದೇವದೂತರಾಗಿದ್ದರೂ ಸರಿ, ದೇವನೊಬ್ಬನ ಹೊರತು ಇನ್ನಾರನ್ನೂ ನೀನು ಗುರುವೆಂದಾಗಲಿ, ಮಾರ್ಗದರ್ಶಕನೆಂದಾಗಲಿ, ಒಪ್ಪಿಕೊಳ್ಳಬೇಡ.

ವಾಸನೆಯು— ಆಸಕ್ತಿ, ಕಾಮನೆ, ರಾಗದ್ವೇಷಗಳೆಂಬ ಮೂರು ಮೂಲತತ್ವಗಳಿಂದ ಘಟಿತವಾಗಿದೆ. ಆಸಕ್ತಿಯನ್ನು ಮೊದಲಿಗೆ ಕಿತ್ತಿಹಾಕಿರಿ. ಅದು ವಿಷಯುಗಳನ್ನು ಛಲದಿಂದ ಅಪೇಕ್ಷಿಸುತ್ತ "ನನಗೆ ಅದು ಲಭಿಸಲಿಕ್ಕೇಬೇಕು, ಅದಿಲ್ಲದೆ ನಾನು ಇರಲಾರೆ" ಎಂದೆನ್ನುತ್ತದೆ; ಎಷ್ಟೋ ಬಂಧುರವಾಗಿ ಅದನ್ನು ನಿರಾಕರಿಸಿದರೂ ಪುನಃ ಅದರ ವಿಚಾರದ ಕಡೆಗೇ ಹೊರಳಿಬರುತ್ತಿರುತ್ತದೆ. ಇದನ್ನು ಬಿಸಾಡಲಿಕ್ಕೆ ನಿಮ್ಮ ಸಂಕಲ್ಪಶಕ್ತಿಯನ್ನೂ, ವಿಶುದ್ಧ ಅಂತಃಕರಣವನ್ನೂ ಇದರ ಮೇಲೆ ಪ್ರಯೋಗಿಸಿರಿ. ಭಾವನಾವೃತ್ತಿಗಳು ಶಾಂತವಾದರೆ ಈ ಆಸಕ್ತಿಯು ತನ್ನಿಂದ ತಾನೇ ಸತ್ತುಹೋಗುವುದು. ಆದರೆ ಕೆಲಕಾಲ ಅದು ವಿಪುಲವಾಗಿ ರೋಷಗೊಂಡು ಭಾವನಾವೃತ್ತಿಗಳನ್ನು ಪುನಃ ಎಚ್ಚರಿಸಿ ತನ್ನೆಡೆಗೆ ತೆಗೆದುಕೊಳ್ಳುವುದಕ್ಕೆ ಪ್ರಯತ್ನಿಸುವದು. ಸಂಕಲ್ಪಶಕ್ತಿಯನ್ನು ಧೈರ್ಯವಾಗಿ ತಾಳ್ಮೆಯಿಂದ ಪ್ರಯೋಗಿಸಿರಿ; ಕಾರ್ಯ

ಹಾಸಿಯಿಂದ ವಿಘ್ನವಾಗದಂತೆ ನೋಡಿಕೊಳ್ಳಿರಿ. ಯಾಕೆಂದರೆ ವಾಸನೆಯು ಅದೊಂದು ಭಯಾನಕ ವಸ್ತುವಾಗಿದೆ. ನಿವಾರಿಸಲಿಕ್ಕೆ ಕಠಿಣವಾಗಿರುವ ಜಿಗಳಿಯುಹುಳದಂತೆ ಅದು ಇರುತ್ತದೆ. ನಿಶ್ಚಯವಾಗಿ ಅದು "ಕೊಡು, ಕೊಡು" ಎಂದು ಕಿರಚುವ ಹಿರಿಜಿಗಳಿಯ ಮರಿಯಾಗಿದೆ. ದರ್ಪದಿಂದ ಅರವವನ್ನು ಸ್ತಬ್ಧಗೊಳಿಸಬೇಡಿರಿ. ಅದನ್ನು ಗಣನೆಗೆ ತಾರದೆ ಆ ಗಲಭೆಗಾರನನ್ನು ಹೊರದೂಡುವುದಕ್ಕೆ ಕೇವಲ ಸಂಕಲ್ಪಶಕ್ತಿಯನ್ನು ಮಾತ್ರ ಪ್ರಯೋಗಿಸಿರಿ.

ಆಸಕ್ತಿಯು ದುರ್ಬಲವಾಗಲು ಕಾಮನೆಯ ಶಕ್ತಿಯು ಹತ್ತರಲ್ಲೊಂಬತ್ತು ಪಾಲು ಶಿಥಿಲವಾಗುವದರಿಂದ ನೀವು ಅದನ್ನು ಸುಲಭವಾಗಿ ಬಿಸಾಡಿಬಿಡಬಹುದು. ಆದರೂ ಪ್ರಬಲ ಪರಿಪಾಠದ ಮೂಲಕ ಕೆಲಕಾಲ ಕೆಲವೊಂದು ವಿಷಯಗಳನ್ನು ಕುರಿತು ಕಾಮನೆ ಮಾಡುವುದು ಬರುವದು. ಆದರೆ ಹೃದಯ–ಬುದ್ಧಿಗಳಲ್ಲಿ ಅಲ್ಲ, ಪ್ರಾಣದಲ್ಲಿ ಮಾತ್ರ. ಆಸಕ್ತಿ ಹೋದಬಳಿಕ ಮಾತ್ರವೇ– ಆಶಿಸಿದ ವಸ್ತುವಿನ ನಿರಾಕರಣವು ತನ್ನ ಹಿಂದೆ ಸ್ಥಾಯಿಯಾದ ದುಃಖವನ್ನಾಗಲೀ, ನಿರಂತರ ಬುಭುಕ್ಷೆಯನ್ನಾಗಲಿ ಉಳಿಸುವದಿಲ್ಲ. ಹೃದಯದ ಶಾಂತಿಗೆ ತಾತ್ಪೂರ್ತಿಕ ವಿಘ್ನವು ಮಾತ್ರ ಘಟಿಸುತ್ತಿರುತ್ತದೆ.

ಕಾಮನೆಯನ್ನು ತಳ್ಳಿಬಿಟ್ಟಿದ್ದರೂ ಇನ್ನೂ ರಾಗವು ಉಳಿದುಕೊಂಡೇ ಇರುತ್ತದೆ; ರಾಗವಿದ್ದುದಾದರೆ ದ್ವೇಷವೂ ರೂಢಿಗೆ ಬರುವುದು ನಿಶ್ಚಿತ. ಕಾಮನೆಯು ಹೋಗಿರುವದರಿಂದ ನೀವು ಯಾವುದನ್ನೂ ಆಶೆ ಮಾಡುವುದಿಲ್ಲ. ಆದರೆ ಕೆಲವೊಂದು ವಿಷಯಗಳು ಬಂದರೆ ನಿಮಗೆ ಅವು ಸೇರುವದಿಲ್ಲ; ಬೇರೆ ಕೆಲವೊಂದು ವಿಷಯಗಳು ಬಂದರೆ ನಿಮಗೆ ಸಂತೋಷವೂ ಉಲ್ಲಾಸವೂ ಅನುಭೂತವಾಗುವವು. ನಿಮಗೆ ಬೇಕಾದುದರ ಬಗೆಗೆ ನೀವು ಬಂಡಾಯವನ್ನೆಬ್ಬಿಸುವುದಾಗಲಿ, ತೀರ ಅದಕ್ಕೇ ಅಂಟಿಕೊಳ್ಳುವುದನ್ನಾಗಲಿ ಮಾಡಲಾರಿರಾದರೂ ಕೆಡಕೆಂಬುದರ ಬರುವಿಕೆಯು ನಿಮಗೆ ರುಚಿಸಲಾರದು; ನಿಮ್ಮ ಹಿಗ್ಗಿನ ಹ್ರಾಸವು ನಿಮಗೆ

ರುಚಿಸಲಾರದು. ಆಗಲೂ ನೀವು "ಬಹಳ ಒಳ್ಳೆಯದು (ಅಡ್ಡಿಯಿಲ್ಲ)" ಎಂದು ಸಹಿಸುತ್ತೀರಾದರೂ ಕೆಡಕು ನಿಮಗೆ ಸೇರುವದಿಲ್ಲ. ಆ ರಾಗವನ್ನೂ ದ್ವೇಷವನ್ನೂ ಕಿತ್ತಿಹಾಕಿ ಪರಿಪೂರ್ಣಸಮತೆಯುಳ್ಳವರಾಗಿರಿ.

ಯಾವಾಗ ನೀವು ಪರಿಪೂರ್ಣ ಸಮತೆಯುಳ್ಳವರಾಗುವಿರೋ ಆವಾಗಲೇ ನಿಮಗೆ ಪರಿಪೂರ್ಣ ದೈವೀಶಾಂತಿಯೂ ಶುದ್ಧ ದೈವೀ ಭೋಗವೂ ಪ್ರಾಪ್ತವಾಗುವವು. ಶಾಂತಿಯು ನಿಷ್ಕ್ರಿಯ ಆನಂದವಾಗಿದೆ; ನಿರ್ಗುಣ ಬ್ರಹ್ಮನನ್ನಾಶ್ರಯಿಸಿದವರು ಅದನ್ನು ಪಡೆಯುವರು. ಶುದ್ಧ ಭೋಗವು ಸಕ್ರಿಯ ಆನಂದವಾಗಿದೆ; ತ್ರಿಗುಣಾತೀತ ಅನಂತ ಬ್ರಹ್ಮನನ್ನಾಶ್ರಯಿಸಿದವರು ಅದನ್ನು ಪಡೆಯುವರು. **ನೀವು ಎರಡನ್ನೂ ಹೊಂದಬಲ್ಲಿರಿ, ಮತ್ತು ಎರಡನ್ನೂ ಪಡೆಯುವುದೇ ಉತ್ತಮವು.** ದೇವನು ಪರಿಪೂರ್ಣ ಶಾಂತಿಯನ್ನು ತಳಹದಿಯಾಗಿ ಮಾಡಿಕೊಂಡು ಶುದ್ಧ ಭೋಗದೊಂದಿಗೆ ಜಗತ್ತಿನ ಆನಂದವನ್ನು ಸ್ವೀಕರಿಸುವನು.

ಬಹುಜನರಿಗೆ ವಾಸನಾ-ಕಾಮನಾರಹಿತವಾದ ಭೋಗದ ಅರ್ಥವೇ ಆಗುವದಿಲ್ಲ. ಇದು ಮೂಢ ಕಲ್ಪನೆ; ಅಷ್ಟಿಷ್ಟು ನೆಲೆಗೊಂಡದ್ದಲ್ಲ— ಯಾಕೆಂದರೆ ಇದು ನೈಸರ್ಗಿಕವೂ ಬಹುಶಃ ಸಾರ್ವತ್ರಿಕವೂ ಆಗಿದೆ. ಇದು ಅಜ್ಞಾನವು; ಅಜ್ಞಾನದ ಸಾರಭೂತವಾದ ಅಂಶವು. ವಾಸನೆಯನ್ನು ಕಿತ್ತಿಹಾಕುವ ವರೆಗೆ ನಿಜವಾಗಿ ಭೋಗದ ಆರಂಭವೇ ಆಗುವದಿಲ್ಲ. ವಾಸನಾತೃಪ್ತಿಯ ಪರಿಣಾಮ ಸ್ವರೂಪವಾಗಿ ನೀವು ಪಡೆದದ್ದು ಬಾಧೆ ಪಡುವಂತಹದೂ, ಸುರಕ್ಷಿತವಲ್ಲದ್ದೂ, ಅಸ್ವಸ್ಥವಾದದ್ದೂ, ಸೀಮಾಬದ್ಧವಾದದ್ದೂ ಆಗಿರುತ್ತದೆ. ಆದರೆ ಶುದ್ಧ ಭೋಗವು ಸ್ಥಿರವೂ, ಸ್ವಯಂ ಪ್ರಾಪ್ತವೂ, ವಿಜಯಶಾಲಿಯೂ, ಸೀಮಾರಹಿತವೂ, ವಿರಸ ವೈರಾಗ್ಯರಹಿತವೂ ಆಗಿದ್ದು ಅಜರಾಮರವಾಗಿ ಆನಂದಪೂರ್ಣವಾಗಿರುತ್ತದೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅದು ಹರ್ಷವಲ್ಲ, ಸುಖವಲ್ಲ, ಆದರೆ ಆನಂದ. ಅದು ಅಮೃತ. ಅದು

ದೇವತ್ವವಾಗಿದೆ, ಅಸುರತ್ವವಾಗಿದೆ, ದೇವನೊಡನೆ ಸಾಧರ್ಮ್ಯತಾ ಪ್ರಾಪ್ತವಾಗುವದೇ ಅದಾಗಿದೆ. ಅದು ಕಾಮುವಾಗಿರದೆ ವಿಶುದ್ಧ ಲಿಪ್ಸಾಪಾತ್ರವಾಗಿದೆ. ದೇವನು ಏನಿತ್ತರೂ ಅದನ್ನು ಅಖಂಡವಾಗಿ ಸ್ವೀಕರಿಸುವುದಕ್ಕೂ, ಅದರ ಆನಂದವನ್ನು ಭೋಗಿಸುವುದಕ್ಕೂ ಸಿದ್ಧ ನಿರುವುದೇ ಅದಾಗಿದೆ. ರಾಜಸಿಕ ಮನುಷ್ಯನಿಗೆ ಚಿತ್ರಹಿಂಸೆಯೆಂದು ತೋರುವ ದುಃಖ, ವೇದನೆ, ನಿಷ್ಕರುಣೆ ಮೊದಲಾದ ಪ್ರತಿಯೊಂದು ವಿಷಯವೂ ಆಗ ಆನಂದ ರೂಪಕ್ಕೆ ಪಲ್ಲಟಿಸುವವು. ಇಂಥದೊಂದು ಜೀವವು ನರಕಕ್ಕೆ ನೂಕಲ್ಪಟ್ಟರೆ ಆತನಿಗೆ ಅದು ನರಕವೆಂದು ಅನು ಭವಕ್ಕೆ ಬಾರದೆ ಸ್ವರ್ಗವೇ ಆಗಿಬಿಡುವದು. ಆತನು ಭಕ್ತನಂತೆ "ಇದು ನನ್ನ ಪ್ರಿಯನಿಂದ ಬಂದದ್ದು" ಎಂದು ಅನ್ನದೆ ಪೂರ್ಣ ಜ್ಞಾನಿ ಯಂತೆ "ಇದು ನನ್ನ ಪ್ರಿಯನೇ ಆಗಿದೆ. ಇದು ಆನಂದಂ ಬ್ರಹ್ಮನೇ ಆಗಿದೆ. ಕಾಂತಂ, ಶಿವಂ, ಶುಭಂ, ಸುಂದರವ್ ಇದಾಗಿದೆ" ಎಂದು ಅನ್ನುವನು.

ಈ ಶುದ್ಧೀಕರಣವು ಯಾವ ಕ್ರಮಪದ್ಧತಿಯಿಂದುಂಟಾಗುವ ದೆಂಬುದರ ಪುನರುಚ್ಚಾರವನ್ನು ಮಾಡುವ ಅವಶ್ಯಕತೆಯಿಲ್ಲ. ನಾನ ದನ್ನು ಸಾಕಷ್ಟು ನಿರ್ದೇಶಿಸಿದ್ದೇನೆ, ಈ ತಾಂತ್ರಿಕ ಕ್ರಮವು ಕೊನೆಯುವರೆಗೆ ಒಂದೇ ಆಗಿದೆ. ಶಕ್ತಿಯುಮೇಲೆ ಶ್ರದ್ಧೆ, ದೈವೀ ಸಂಕಲ್ಪ ಶಕ್ತಿಯು ಆಧಾರದಲ್ಲಿ ಕಾರ್ಯಕಾರಿಯಾಗುವಿಕೆ; ಇಷ್ಟೇ. ಒಳಗಿನ ಪುರುಷನು ಏನೂ ಮಾಡಬೇಕಾದುದಿಲ್ಲ, ಸಾಧನೆಯ ಈ ತುದಿಯಿಂದ ಆ ತುದಿಯ ವರೆಗೂ ಆತನು ಅಕರ್ತನಾಗಿಯೇ ಉಳಿ ಯುವನು. ಆದರೂ ಆತನು ಆಜ್ಞೆ ಹಾಗೂ ಅನುಶಾಸನಗಳ (Command and Sanction) ಉಗಮ ಸ್ವರೂಪನಾದ ಈಶ್ವರನು. ತನ್ನ ಪ್ರಜೆಗಳ ಮೂಲಕ ಸ್ವಾಧೀನತಪ್ಪಿದ ಚಕ್ರವರ್ತಿಯು ಮೆಲ್ಲ ಮೆಲ್ಲನೆ ತನ್ನ ಹದಗೆಟ್ಟ ಹಾಗೂ ಹುಚ್ಚೆದ್ದ ಸಾಮ್ರಾಜ್ಯದಲ್ಲಿ ನಿಯಂ ತ್ರಣದ ಪುನಃ ಪ್ರತಿಷ್ಠೆಯನ್ನು ಮಾಡುತ್ತಲಿದ್ದಾನೆ.

---

# ೮ ದೇಹ

ಪ್ರಕರಣೋಪಕ್ರಮಣಿಕೆ :—

" ನಿರಾಕಾರ ಆತ್ಮನೊಂದಿಗೆ ನಮ್ಮ ಕಾರಭಾರವೇನೂ ಬೇಕಾಗಿಲ್ಲ. ಜೀವನವನ್ನು ಸಹ ಸಾಗಿಸಬೇಕಾಗಿದೆ........ನಮ್ಮ ದೃಷ್ಟಿಪಥದಿಂದ ಯಾವುದನ್ನೂ ಬಹಿಷ್ಕರಿಸುವುದು ನನ್ನ ಆಶಯವಲ್ಲ........ದೇಹರಹಿತವಾದ ಮನೋರಹಿತವಾದ ಆತ್ಮವು ಅದೇನೇ ಇದ್ದರೂ ಮಾನವ ಮೂರ್ತಿಯಲ್ಲ. ಆದುದರಿಂದ ಮನುಷ್ಯಕೋಟಿಗೆ ಸಂಬಂಧಿಸಿದ ಅಧ್ಯಾತ್ಮವು ದೇಹ-ಪ್ರಾಣ-ಮನಗಳನ್ನು ಕ್ಷುಲ್ಲಕವೆಂದೆಣಿಸಲಾಗದು......ಮಾನವನೊಳಗಿನ ದೇವತ್ವ ಸಂಪಾದನೆ ಹಾಗೂ ದೇವತ್ವ ಪ್ರಕಾಶನಕ್ಕೆ ಅಡಿಗಲ್ಲಾಗಿ ಸಮ್ಯಕ್ಸಿದ್ಧ ದೇಹವು ಬೇಕು. ಭಗವದುನ್ಮುಖವಾದ ಜೀವಧರ್ಮದ ಪರಿಸಮಾಪ್ತಿಗೆ ದೇಹವು ಒಂದು ಸಾಧನವು........ದೇಹವನ್ನು ಶವದಂತೆ ತಿಳಿಯುವುದು ಸನ್ಯಾಸದ, ನಿರ್ವಾಣಪಥದ ಲಕ್ಷಣ. ಈ ಭಾವನೆಯನ್ನಿಟ್ಟುಕೊಂಡು ಸಂಸಾರ ಮಾಡಲಿಕ್ಕಾಗುವದಿಲ್ಲ. ಸರ್ವ ವಸ್ತುಗಳಲ್ಲಿ ಆನಂದವು ಬೇಕು—ಆತ್ಮದಲ್ಲಿ ಹೇಗೋ ಹಾಗೆ ದೇಹದಲ್ಲಿ ಸಹ. ದೇಹವು ಚೈತನ್ಯಮಯ;

ದೇಹವು ಭಗವಂತನ ರೂಪವು. ಜಗತ್ತಿನಲ್ಲಿ ಏನಿದೆಯೋ ಆದೆಲ್ಲದರಲ್ಲಿ ಭಗವಂತನನ್ನು ಕಂಡರೆ-ಸರ್ವಂ ಖಲ್ವಿದಂ ಬ್ರಹ್ಮ, ವಾಸುದೇವಃ ಸರ್ವಂ ಎಂಬೀ ದರ್ಶನವು ಲಭಿಸಿ ದರೆ ವಿಶ್ವಾನಂದವುಂಟಾಗುವದು. ಶರೀರದಲ್ಲಿ ಕೂಡ ಆ ಆನಂದದ ಮೂರ್ತತರಂಗವು ಧಾವಿಸುವದು. ಈ ಅವಸ್ಥೆಯಲ್ಲಿಯೇ ಅಧ್ಯಾತ್ಮಭಾವಪೂರ್ಣರಾಗಿ ಸಕಲ ಕರ್ಮಗಳಲ್ಲಿ ಭಗವಂತನ ಆನಂದಮಯ ವಿಕಾಸವನ್ನು ಅನುಭವಿಸಬಲ್ಲೆವು........ದೇಹಕ್ಕೆ ಬಲವೂ ಆರೋಗ್ಯವೂ ಇರಬೇಕೆಂಬುದೆ ನಮ್ಮ ಧ್ಯೇಯ. ಆದರೆ ಅದರ ಉದ್ದೇಶವು ಆರೋಗ್ಯಕ್ಕಾಗಿ ಆರೋಗ್ಯ, ಬಲಕ್ಕಾಗಿ ಬಲ—ಎಂಬುದು ಮಾತ್ರವಲ್ಲ" ಎಂದು ಶ್ರೀ ಅರವಿಂದ ಯೋಗಿಗಳು ಸ್ಥೂಲ ದೇಹದ ವಿಷಯದಲ್ಲಿ ವಿವೇಚಿಸಿದ್ದಾರೆ. ಹಠಯೋಗದಿಂದ ಪ್ರಾಪ್ತವಾಗುವ ಅಗಾಧ ದೇಹ ಶಕ್ತಿಯು ಇವರಿಗೂ ಮಾನ್ಯವಿದೆಯಾದರೂ ಅದನ್ನು ಅಂಥ ಕೃಚ್ಛ್ರಸಾಧನಗಳಿಂದಲೇ ಸಾಧಿಸಬೇಕಾದ ಅಗತ್ಯ ವೇನೂ ಇಲ್ಲವೆಂದು ಸ್ವಾನುಭವದಿಂದ ಮನಗಂಡು ಹೇಳುತ್ತಲಿದ್ದಾರೆ. ಬುದ್ಧಿ-ಮನ-ಚಿತ್ತ-ಪ್ರಾಣಗಳಿಂದ ಕೂಡಿದ ಅಂತಃಕರಣವು ಸಂಕಲ್ಪ ಶಕ್ತಿಯ ಪ್ರಯೋಗ ದಿಂದ ಹಿಂದೆ ವಿವೇಚಿಸಿದಂತೆ ಶುದ್ಧವೂ ಸಿದ್ಧವೂ ಆದರೆ ಆಗ ದೇಹವೂ ಕೂಡ ಶುದ್ಧವೂ ಸಿದ್ಧವೂ ಆಗಬೇಕಾದುದು ಅದಕ್ಕೆ ಕ್ರಮಪ್ರಾಪ್ತವೇ ಆಗಿದೆಯಂತೆ. ವಿಜ್ಞಾನಪೂತ

ದೇಹವು ಸ್ವಾಭಾವಿಕವಾಗಿಯೇ ಸಕಲನ್ಯೂನತಾವಿರಹಿತ ವಾಗಿರುತ್ತದಂತೆ. ಇಲ್ಲಿ ಇನ್ನೊಂದು ಮಹತ್ವದ ಮಾತಿದೆ. ಅದೇನೆಂದರೆ ಸನ್ಯಾಸಿಗಳ ಹಾಗೆ ದೇಹವನ್ನು ಶವವಾಗಿ ಭಾವಿಸಬಾರದಾಗಿರುವಂತೆಯೇ ಆಧುನಿಕ ಐರೋಪ್ಯಶಾಸ್ತ್ರಜ್ಞರ ಹಾಗೆ ದೇಹವೇ ಮನದ ಪ್ರಭು ವೆಂದೂಭಾವಿಸಬಾರದಾಗಿದೆ. ನಿಜವಾಗಿ ಅಂತಃಕರಣಗಳ ಪ್ರತಿಬಿಂಬವೇ ದೇಹವು.

ಸ್ಥೂಲದ ವಿಷಯವೊಂದು ಉಳಿಯಿತು. ಮಾನವನ ಜಡವಿಭಾಗ ವಿದು. 'ಸ್ಥೂಲ ಪ್ರಾಣ' ಅಥವಾ ಭೌತಿಕ ಮಜ್ಜಾತಂತುಮಂಡಲ, ಹಾಗೂ ಪ್ರಾಣದ ಕಾರ್ಯವು ಯಾವದರಲ್ಲಿ ನಡೆಯುವದೋ ಆ 'ಅನ್ನಂ' ಅಥವಾ ದೇಹ ಇವೆರಡರಿಂದ ಕೂಡಿದ್ದೇ ಅದು. ಪ್ರಾಣವು ಜೀವಿತದ ಮೂಲತತ್ವವಾಗಿದೆ. ಮೃತ್ಯುವು ಸೂಕ್ಷ್ಮ ದೇಹ ಹಾಗೂ ಸ್ಥೂಲದೇಹಗಳ ನಡುವಿನ ಕಟ್ಟು ಕಳಚುವದರಿಂದಲೇ ಬರುತ್ತದೆ. ಆ ಕಟ್ಟು ಪ್ರಾಣವೇ.

ಸೂಕ್ಷ್ಮದೇಹವು ಪ್ರಾಣವನ್ನು ತನ್ನೊಳಗೆ ಸೆಳೆದುಕೊಂಡು ಹೊರಟು ಹೋಗುತ್ತದೆ; ಜಡದೇಹದಲ್ಲಿ ಅದರ ಅಲ್ಪಾಂಶವು ಮಾತ್ರ 'ಅಪಾನ' ರೂಪದಿಂದ ಉಳಿದುಕೊಂಡು ಲಯಪ್ರಾಪ್ತವಾಗುವ ಬಲವಿ ನಲ್ಲಿರುತ್ತದೆ. ಅದಕ್ಕೆ ನಾವು ಕೊಳೆಯುವುದೆಂದು ಅನ್ನುತ್ತೇವೆ. ಅದರದೇ ಇನ್ನೊಂದು ಭಾಗವಾದ (ಪಂಚಪ್ರಾಣಗಳಲ್ಲೊಂದಾದ) 'ಪ್ರಾಣ' ವೆಂಬುದು— ಯಾವುದು ಅದೊಂದು ತಾನೆ ದೇಹದೊಡನೆ ಏಕೀಭವಿಸಿಬಿಟ್ಟಿರುವದೋ ಅಂಥ ಈ ಪ್ರಾಣವು— ಉಗಿಯಾಗಿ ಹಾರಿ ಹೋಗುತ್ತದೆ, ಹಾಗೂ ಅಪಾನವು ತೀವ್ರ ಪೃಥಕ್ಕರಣದ ಕಡೆಗೆ ಸಾಗಿಸುತ್ತದೆ– ಕೆಲವೊಂದು ಪಶುಗಳಲ್ಲಿ ಪ್ರಾಣವೆಂಬುದು ಎಷ್ಟು

ವಿಪುಲವಾಗಿರುವದೆಂದರೆ ಸೂಕ್ಷ್ಮ ದೇಹವು ಹೊರಟು ಹೋದಬಳಿಕ ಕೂಡ ದೇಹದಲ್ಲಿ ಜೀವಿತದ ಚಿಹ್ನಗಳು ಕಾಣಿಸುತ್ತಿರುತ್ತವೆ.

ಮೊದಲಿನಿಂದ ಕೊನೆಯುವರೆಗೆ ನಾನು ಮಾನವನ ಸೂಕ್ಷ್ಮ ವಿಭಾಗವಾದ ಅಂತಃಕರಣ ಅಥವಾ ಮಾನಸದ ಶುದ್ಧೀಕರಣವನ್ನು ಕುರಿತು ಹೇಳಿದ್ದೇನೆ. ದೇಹದ ವಿಷಯವು ನನ್ನ ಉದ್ದೇಶಕ್ಕೆ ಬಂದಿಷ್ಟು ಹೊರಗಿನದಾಗಿದೆ. ಆದಾಗ್ಯೂ ಕೆಲವು ಮಾತುಗಳನ್ನು ಹೇಳುವ ಅವಶ್ಯಕತೆಯಿದೆ. ನಾನೀಗ ನಿಮ್ಮ ಇದಿರಿಗೆ ವಿಶದಗೊಳಿಸುತ್ತಿರುವ ಯೋಗವು ಯಾವ ಮೂಲಸಿದ್ಧಾಂತದ ಮೇಲೆ ನಿಂತಿದೆಯೆಂದರೆ—**ಜಡದೇಹವು ಕೇವಲವಾಗಿ ಸೂಕ್ಷ್ಮದ ನೆರಳು ಅಥವಾ ಸೂಕ್ಷ್ಮದ ಕೃತಿಯೇ ಆಗಿದೆ. ಮಾನಸವು ತನ್ನನ್ನು ಎರಕ ಹೊಯ್ಯುವುದಕ್ಕೆ ತಾನೇ ನಿರ್ಮಿಸಿಕೊಂಡ ಪಡಿಯಚ್ಚೆಂದರೆ ಈ ದೇಹ. ಮಾನಸವು ಇದನ್ನು ನಿರ್ಮಿಸಿಕೊಂಡಿರುವಂತೆ ಮಾರ್ಪಡಿಸಿಕೊಳ್ಳಲೂ ಬಲ್ಲದು.**

ಶುದ್ಧವಾದ, ಸ್ವತಂತ್ರವಾದ, ಸಿದ್ಧವಾದ ( ಪರಿಪೂರ್ಣವಾದ ) ಮಾನಸವು ದೇಹದ ವಿಷಯುದಲ್ಲಿ ತನ್ನಿಷ್ಟ ಬಂದಂತೆ ಬೇಕಾದುದನ್ನು ಮಾಡಬಲ್ಲದು. ಭೌತಿಕ ವಿಭಾಗದ ಮೇಲೆ ಪೂರ್ವಕರ್ಮದ ಸಂಕಲ್ಪವು ವ್ಯಾಧಿ, ಸಂಕಷ್ಟ, ದುರ್ದಶೆ, ಮರಣ ಮೊದಲಾದವುಗಳ ರೂಪದಿಂದ ನೆರವೇರುವದಕ್ಕಾಗಿ ಮಾನವು ತಾನು ಎಳ್ಳಷ್ಟೂ ನೊಂದುಕೊಳ್ಳದೆ ದೇಹವನ್ನು ಇದ್ದಕ್ಕಿದ್ದಂತೆ ಅದಕ್ಕೆ ಒಪ್ಪಿಸಿಕೊಡಲೂ ಬಹುದು. ಅಶುದ್ಧಿ ಹಾಗೂ ಬಂಧನವೆಂಬುದೆಲ್ಲಾ ಮಾನಸದ ಅಶುದ್ಧಿ ಹಾಗೂ ಬಂಧನದ್ದೇ ಭೌತಿಕ ಪ್ರತಿರೂಪವಾಗಿದೆ.

ಕಾರಣವು ನಿಂತೊಡನೆ ಕಾರ್ಯವೂ ನಿಲ್ಲುತ್ತದೆ; ಆದರೆ ತತ್ಕ್ಷಣದಲ್ಲಿ ಅಲ್ಲ. ಉಗಿ ಹಾಗೂ ಯಂತ್ರ ( Locomative ) ಇವುಗಳಂತೆ ಇದಾಗಿದೆ. ಪೂರ್ವಜನ್ಮಸಂಸ್ಕಾರ ಜನಿತ ಪರಿಪಾಠಗಳನ್ನು ಮಾನಸ

ಕ್ಷೇತ್ರದಿಂದ ಹೊರದೂಡಲು ಅವು ಸಂಪೂರ್ಣವಾಗಿ ದೇಹದಲ್ಲಿ ಬಂದು ಬೀಳುವವು. ಅಲ್ಲಿ ಅವು ಕ್ರಿಯಾಶೀಲವಾಗುವ ಹಾಗೆ ನೀವು ಅವುಗಳಿಗೆ ಒಪ್ಪಿಗೆ ಕೊಡಬಲ್ಲಿರಿ, ಬಹುಜನರು ಹೀಗೇ ಮಾಡುತ್ತಾರೆ; ಅಥವಾ ನೀವು ದೇಹಸ್ಥವಾಗಿರುವ ಅವುಗಳ ಬೆನ್ನಟ್ಟಿ ಅಲ್ಲಿಯಿಂದಲೂ ಸಹ ಹೊರದೂಡಬಲ್ಲಿರಿ. ಅಷ್ಟು ಮಾಡಿದರೆ ನಿಮಗೆ ಕಾಯಾ ಶುದ್ಧಿಯೂ ಕಾಯಾಸಿದ್ಧಿಯೂ ಪ್ರಾಪ್ತವಾಗುವವು.

ಸಾಧಾರಣವಾಗಿ ಹಠಯೋಗ ಮತ್ತು ರಾಜಯೋಗದ ಪದ್ಧತಿಗಳಿಂದ ಅವುಗಳನ್ನು ಪ್ರಾಪ್ತಿಮಾಡಿಕೊಳ್ಳಲಾಗುತ್ತಿರುತ್ತದೆ. ಆದರೆ ಆ ಪದ್ಧತಿಗಳ ಅಗತ್ಯವಿಲ್ಲ. ನಾನು ತೋರಿಸಿಕೊಡುತ್ತಲಿರುವ ಪದ್ಧತಿಯು ಅವುಗಳಿಗಿಂತ ಉತ್ತಮವಾಗಿದೆಯಲ್ಲದೆ ಅನುಸರಿಸುವುದಕ್ಕೆ ನಿಶ್ಚಯವಾಗಿ ಹೆಚ್ಚು ಸುಲಭತರವೂ ನಿಶ್ಚಿತವೂ ಆಗಿದೆ.

ಸತ್ಯ-ಸತ್ಯವಾದ ಒಂದು ಸಿದ್ಧಾಂತವೇನೆಂದರೆ—ವಿಶುದ್ಧ ಮನವು ದೇಹದ ವಿಶುದ್ಧಿಯನ್ನುಂಟುಮಾಡುತ್ತದೆ, ಮುಕ್ತಮನವು ದೇಹದ ನಿರಂಕುಶತೆಯನ್ನುಂಟುಮಾಡುತ್ತದೆ, ಪರಿಪೂರ್ಣ ಮನವು ದೇಹದ ಪರಿಪೂರ್ಣತೆಯನ್ನುಂಟುಮಾಡುತ್ತದೆ; ನೀವು ಯೋಗಾವಲಂಬನದಿಂದ ಅಂತಃಕರಣದಲ್ಲಿ ಕೆಲವೊಂದು ಅಂತರದವರೆಗೆ ಸಾಗಿದರೆ ದೇಹವು ತಾನೇ ನೂತನ ಪ್ರಭಾವಗಳಿಗೆ ಪ್ರತಿಸ್ಫುರಣವನ್ನು ಕೊಡಲಾರಂಭಿಸುತ್ತದೆ. ಆದರೆ **ಮಾನಸದ ಕಾರ್ಯವನ್ನೆಲ್ಲ ಮುಗಿಸಿ ತೀರಿಸುವವರೆಗೆ ಅರಿತರಿತು ದೇಹದ ಗೊಡವೆಗೆ ಹೋಗತಕ್ಕದ್ದಲ್ಲ.**

ಪ್ರಕೃತಿಯು ತನ್ನ ಕಾರ್ಯವನ್ನು ಮಾಡಲಿ. ಶಕ್ಯವಿದ್ದಮಟ್ಟಿಗೆ ದೇಹದಿಂದ ಅಲಿಪ್ತರಾಗಿರಿ. ಕೇವಲ ಅದೊಂದು ಪೆಟ್ಟಿಗೆಯೆಂದು ತಿಳಿದುಕೊಂಡು ದೇವನ ಹಾಗೂ ಆತನ ಮಹಾಶಕ್ತಿಯ ನೇತೃತ್ವದಲ್ಲಿ ಅದನ್ನು ಬಿಟ್ಟುಗೊಡಿರಿ. ಬಹುಜನ ಸಾಧಕರು ಯೋಗ ಸಾಧನದ ಕಾಲದಲ್ಲಿ ಬರುವ ಬೇನೆಬೇಸರಿಕೆಗಳಿಗೆ ಭಯಪಡುವರು.

ನೀವು ಹೆದರಬೇಕಾಗಿಲ್ಲ. ಯಾಕೆಂದರೆ ನೀವು ನಿಮ್ಮನ್ನು ದೇವನ ಕೈಯಲ್ಲಿ ನೀಡಿದ್ದೀರಿ. ಆತನು ಅದನ್ನು ನೋಡಿಕೊಳ್ಳಲಿಕ್ಕಿದ್ದಾನೆ. ದೇಹಶುದ್ಧ್ಯರ್ಥವಾಗಿ ನಿಮ್ಮ ಸಾಧನದ್ದೇ ಒಂದು ಅಗತ್ಯವಾದ ಅಂಗವಾಗಿ ಅದು ಬರುತ್ತಿರುತ್ತದೆ. ಅದು ತನ್ನ ಕಾರ್ಯವಮಾಡಿ ಕೊಂಡು ಮರೆಯಾಯಿತೆಂದರೆ ಪುನಃ ಹಿಂದಿರುಗುವದಿಲ್ಲ.

ದೇಹದ ಇನ್ನುಳಿದ ಅಸ್ವಸ್ಥತೆಗಳು—ಸರಿಯಿಲ್ಲದ ಭೌತಿಕ ಆಧಾರವು ಸರಿಪಡುವ ಹೊತ್ತಿನಲ್ಲಿ ಪ್ರಾಸಂಗಿಕ ವಸ್ತುಗಳಾಗಿ ಬರುವವು. ನಿಮ್ಮ ಮೆದುಳಿನ ಅಣುಗಳಲ್ಲಿಯೂ, ಮಜ್ಜಾತಂತುಮಂಡಲದಲ್ಲಿಯೂ, ಜಠರ ಹಾಗೂ ದ್ರವವಿಧಾನಗಳಲ್ಲಿಯೂ ಕಲ್ಪನಾತೀತ ಬದಲಾವಣೆಗಳುಂಟಾಗಬೇಕಾಗಿವೆ; ದೈಹಿಕ ಅಸ್ವಸ್ಥತೆಗಳು ಜಾರದೆ ಅವುಗಳಲ್ಲಿ ಅಂಥ ಪರಿಣಾಮಗಳು ಹುಟ್ಟಲಾರವು. ಆದರೆ ಸಾಧನ ಕ್ರಮಕ್ಕೆ ಅಗತ್ಯವಿರುವುದರಕಿಂತ ಹೆಚ್ಚಿಗೆ ಅದೆಂದಿಗೂ ಘಟಿಸಲಾರದು. ದೇಹದ ಮೇಲೆ ಯಾವ ವಿಧದಿಂದಲೂ ಅತ್ಯಾಚಾರ ನಡೆಯಿಸಬೇಡಿರಿ. ಭೌತಿಕ ಚಿಕಿತ್ಸೆಗಳನ್ನು ಉಪಯೋಗಿಸುವುದಾದರೆ ಅವು ಸಹಜವಾದವುಗಳೂ ಶುದ್ಧತರವಾದವುಗಳೂ ಆಗಿರಲಿ. ಎಲ್ಲದರಕಿಂತ ಮೇಲೆ ನಿರಾಶೆಯನ್ನೂ ಭಯವನ್ನೂ ದೂರೀಕರಿಸಿರಿ. ನಿಮ್ಮ ವಿಷಯದಲ್ಲಿ ದೇವನು ಎಷ್ಟು ಜಾಗರೂಕತೆಯನ್ನು ವಹಿಸಬಲ್ಲನೋ ಅಷ್ಟು ನಿಮ್ಮಿಂದಾಗಲಾರದು. ನಿಮ್ಮ ಜಾಗೃತಿಯು ಕೇವಲ ಅಜ್ಞತೆಯಿಂದಲೂ ಅಪಾಂಡಿತ್ಯದಿಂದಲೂ ಕೂಡಿದ್ದು; ಆತನದು ಜ್ಞಾನಪೂರ್ಣವಾಗಿದ್ದು ಉಚಿತ ಪರಿಣಾಮದ ಸಲುವಾಗಿ ಉಚಿತ ಉಪಕರಣಗಳನ್ನು ಉಪಯೋಗಿಸುತ್ತದೆ.

ದೈಹಿಕ ಅಶುದ್ಧಿಗಳು ಮುಖ್ಯವಾಗಿ ವ್ಯಾಧಿ, ಮತ್ತು ವೇದನೆಗಳ ರೂಪದಿಂದಲೂ, ಶೀತೋಷ್ಣಗಳ ಅಸುಖದ ರೂಪದಿಂದಲೂ, ದೈಹಿಕ ಶ್ರಮದ ರೂಪದಿಂದಲೂ ಕಾಣಿಸಿಕೊಳ್ಳುವವು. ಕಾಯಾಶುದ್ಧಿಯ ಪ್ರಥಮ ಲಕ್ಷಣವೆಂದರೆ—ಬೇನೆಬೇಸರಿಕೆಗಳ ಕಡೆಗಿರುವ

ಸಮಸ್ತ ದೇಹಪ್ರವೃತ್ತಿಯ ಲೋಪವು. ಎರಡನೆಯ ಲಕ್ಷಣವೆಂದರೆ ಶೀತೋಷ್ಣಗಳ ದ್ವಂದದಿಂದ ಬಿಡುಗಡೆಯಾಗುವುದು. ಶೀತೋಷ್ಣ ಬೋಧವು ಹೋಗಿಯಾದರೂ ಬಿಡುವದು, ಅಥವಾ ಅದು ಸುಖಾನುಭವ ವಾಗಿಯಾದರೂ ಮಾರ್ಪಡುವದು. ಮೂರನೆಯದು ದೈಹಿಕ ಆಯಾ ಸವು ಕಡಿಮೆಯಾಗುವುದು ಅಥವಾ ಲೋಪವಾಗುವುದು. ವೇದನೆಯು ಸಹ ದೇಹದೊಳಗಿಂದ ಸಂಪೂರ್ಣವಾಗಿ ಕಿತ್ತಿಹಾಕಲ್ಪಡುವದು. ಪ್ರತಿ ಕ್ರಿಯಾ ರೂಪವಾಗಿರುವ ಈ ವೇದನೆಯೆಂಬುದು ಕಿತ್ತಿಹಾಕಲ್ಪಡುವು ದಕ್ಕಿಂತ ಮುಂಚೆ ಆ ವೇದನೆಯ ಅಸುಖಾನುಭವದ ಸ್ಥಳವನ್ನು ಒಂದು ಬಗೆಯ ದೈಹಿಕ ಆನಂದವು ಆಕ್ರಮಿಸುವದು. ಕೊನೆಗೆ ಪ್ರಾಣ ಗತವಾದ ಹಸಿವೆ ನೀರಡಿಕೆಗಳ ಲಾಲಸೆಯು ಲೋಪಹೊಂದುವದರಿಂದ ಆಹಾರದ ಅವಲಂಬನವು ಕಡಿಮೆಯಾಗುವದು, ಅಥವಾ ಅದು ಬಿಟ್ಟೇ ಹೋಗುವದು. ಇವೆಲ್ಲವುಗಳ ಪರಿಪೂರ್ಣತೆಯು ಕಾಯಾಶುದ್ಧಿಯ ತಳಹದಿಯಾಗಿದೆ.

ಆದರೆ ಪರಿಪೂರ್ಣ ಕಾಯಾಶುದ್ಧಿಯು ಮಹಿಮಾ, ಲಘಿಮಾ, ಅಣಿಮಾ, ದೈಹಿಕ ಅಚ್ಛೇದ್ಯತ್ವ, ಕ್ಷಯರಾಹಿತ್ಯ ಮೊದಲಾದ ಇನ್ನು ಕೆಲವು ಸಮೃದ್ಧಿಗಳಿಂದ ಕೂಡಿಕೊಂಡಿರುತ್ತದೆ. ಕಲಿಯುಗದಲ್ಲಿ ಈ ವರೆಗೆ ಅತ್ಯಂತ ಮೇಲ್ತರಗತಿಯ ಸಿದ್ಧರು ಮಾತ್ರವೆ ಇಂಥ ಶಕ್ತಿ ಗಳನ್ನು ಪಡೆದಿರುವರು. ಸಾಮಾನ್ಯವಾದ ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚಪ್ರಾಣಗಳ ಸ್ಥಳವನ್ನು ಪ್ರಾಣದ ಮೂಲಭೂತ ಶಕ್ತಿಯು ಏಕಮಾತ್ರ ಸಹಜಕ್ರಿಯೆಯಾದ ವಿದ್ಯುದ್ವ್ಯಾಪ್ತ ಅನಂತ ಪ್ರಾಣಶಕ್ತಿಯು ಆಕ್ರಮಿಸುವದರ ಮೇಲೆ ಆ ಶಕ್ತಿಗಳು ಅವಲಂಬಿ ಸಿರುವವು.

ಇವೆಲ್ಲವುಗಳು ತಾಂತ್ರಿಕಯೋಗಕ್ಕೆ ಆವಶ್ಯಕ ಘಟಕಗಳು. ನಾನು ಇವುಗಳನ್ನು ವಿಹಂಗಮ ದೃಷ್ಟಿಯಿಂದ ಮಾತ್ರ ಹೇಳಿರುವೆನು. ಯಾಕೆಂದರೆ ನನ್ನ ಉದ್ದೇಶಕ್ಕೆ ಅವು ಹೊರಗಿನವು. ಮಾನಸಸಿದ್ಧಿಯು

ಪೂರ್ಣದಶಾಪ್ರಾಪ್ತವಾದರೆ ಅವೆಲ್ಲವೂ ವಿಕಾಸಹೊಂದುವವು. **ಈ ಮಾನಸಸಿದ್ಧಿಯೊಂದರ ಕಡೆಗೆ ನೀವು ನಿಮ್ಮ ಸಾಮರ್ಥ್ಯವನ್ನೂ ಲಕ್ಷ್ಯವನ್ನೂ ಏಕಾಗ್ರಗೊಳಿಸಬೇಕೆಂಬುದೇ ನನ್ನ ಹಾರೈಕೆ.** ಅದನ್ನು ನೀವು ಸಂಪಾದಿಸಿದರೆ ಆಗ ನಿಮಗೆ ಪ್ರತಿಯೊಂದು ಲಭಿಸುವದು. ಪ್ರಸ್ತುತದಲ್ಲಿ ಬುದ್ಧಿಹೃದಯ ಮನಗಳೇ ಮಾನವನ ಚಟುವಟಿಕೆಯ ಕೇಂದ್ರಗಳಾಗಿವೆ. ದೇಹವು ಅತ್ಯಂತಿಕ ಮಹತ್ವವುಳ್ಳದ್ದಾಗಿದೆಯಾದರೂ ಅದು ಅಸ್ವತಂತ್ರವೂ ಮಾನಸಾಧೀನವೂ ಆಗಿದೆ. ಆದರೆ ಆ ಲೆಕ್ಕದಿಂದ ಅದನ್ನು ಕಡೆಗಣ್ಣಿನಿಂದ ನೋಡಲಿಕ್ಕಾಗದು. ಆದರೆ ಬಹುಜನರು ಅದಕ್ಕೆ ಅಗತ್ಯಕ್ಕಿಂತ ಹೆಚ್ಚು ಮಹತ್ವವನ್ನು ಕೊಡುತ್ತಿರುತ್ತಾರೆ.

ಜೀವನು ಯಾವಾಗ ತನ್ನ ಮಾನಸದ ಈಶ್ವರನಾಗುವನೋ ಆಗ ಆತನ ದೇಹವು ತನ್ನ ಸ್ವಕೀಯ ಸ್ಥಾನದಲ್ಲಿ ಮಾತ್ರ ನಿಂತುಕೊಳ್ಳುವದು. ಆಗ ಅದು ಎಂದಿನಂತೆ ಸಂಕಲ್ಪ ಮತ್ತು ಬುದ್ಧಿಗಳ ಮೇಲೆ ಅಧಿಕಾರ ನಡಿಸುವದನ್ನೂ ಅವುಗಳಿಗೆ ಆತಂಕ ಪಡಿಸುವದನ್ನೂ ಬಿಟ್ಟುಗೊಟ್ಟು ಅವುಗಳಿಗೆ ವಿಧೇಯವಾಗಿ ಅವುಗಳ ಕಡೆಯಿಂದ ಮುದ್ರೆಯನ್ನೊತ್ತಿಸಿಕೊಳ್ಳುವದು.

ಯುರೋಪಿಯನ್ನರಿಗೆ ಭೌತಿಕವೇ ಮಾನಸದ ಪ್ರಭುವಾಗಿದೆಯೆಂಬ ಸಿದ್ಧಾಂತದ ದೆವ್ವ ಬಡಿದುಕೊಂಡಿದೆ. ಆದರೆ ನಾನು ಇದರ ವಿಪರೀತ ದೃಷ್ಟಿಕೋನವನ್ನು ನಿಮ್ಮಲ್ಲಿ ದೃಢಪಡಿಸಬೇಕಾಗಿದೆ. ಮತ್ತು ದೇಹವು ತನ್ನ ಸ್ಥಿತಿಗತಿಗಳನ್ನು ಮಾನಸದ ಮೇಲೆ ಹೊರಿಸುತ್ತಲಿರುವುದು ಮಾನವನ ಅಸ್ವಾಭಾವಿಕ ಅವಸ್ಥೆಯಾಗಿದೆಯೆಂಬುದನ್ನು ನೀವು ಸದಾ ಸ್ಮರಣದಲ್ಲಿಡತಕ್ಕದ್ದು. ಅದನ್ನು ಓಡಿಸಿಬಿಡಲುಬೇಕು. ಮಾನಸವೇ ದೇಹಕ್ಕೆ ಅಪ್ಪಣೆವಿಧಿಸತಕ್ಕದ್ದು, ಮನವೇ ಅದನ್ನು ನಿಬಂಧನೆಗೊಳಿಸತಕ್ಕದ್ದು, ಸರಿಪಡಿಸತಕ್ಕದ್ದು.



# ೯ ಉಪಸಂಹಾರ

ಪ್ರಕರಣೋಪಕ್ರಮಣಿಕೆ :—

ಶ್ರೀ ಅರವಿಂದರ ಯೋಗದ ಅಂಗಗಳು ನಾಲ್ಕು ಅವು— ೧ ಶುದ್ಧಿ, ೨ ಮುಕ್ತಿ, ೩ ಭುಕ್ತಿ, ೪ ಸಿದ್ಧಿ. ಜೀವಧರ್ಮಕ್ಕೆ ಅನುಕೂಲವಾಗಿರುವ ಮನ-ಪ್ರಾಣ-ದೇಹಗಳ ಪ್ರವೃತ್ತಿಯು ಸ್ತಬ್ಧವಾಗಿ ಅವು ಆತ್ಮಶಕ್ತಿಗೆ ಅನುಕೂಲವಾಗುವುದೇ ಶುದ್ಧಿ; ಅರ್ಥಾತ್ ಆಧಾರಗಳ ಪೂರ್ವಸಂಸ್ಕಾರವು ಲೋಪವಾಗುವುದೇ ಶುದ್ಧಿ. ಇನ್ನು ನಿಖಿಲ ಚರಾಚರ ವಸ್ತುಗಳನ್ನು ಭಿನ್ನಭಿನ್ನ ವಸ್ತುಗಳೆಂದೆಣಿಸದೆ ತನ್ನೊಳಗಿರುವಂತೆ ಅವೆಲ್ಲವುಗಳಲ್ಲಿಯೂ ಒಬ್ಬ ಅದ್ವಿತೀಯ ಈಶ್ವರನೇ ಪಾತ್ರವಹಿಸಿ ಲೀಲೆಗೈಯುತ್ತಿರುವನೆಂದು ಮನಗಂಡು ಅಹಂಕಾರ ಹಾಗೂ ದ್ವಂದ್ವಲೇಪವನ್ನು ತೊಳೆದುಕೊಂಡು ತ್ರಿಗುಣಗಳ ಬಂಧನವನ್ನು ಹರಿದುಕೊಳ್ಳುವದೇ ಮುಕ್ತಿಯು. ಯೋಗೀಶ್ವರ ಅರವಿಂದರು ಹೇಳುವ ಮುಕ್ತಿಯ ಸ್ವರೂಪವು ಇಂತಹದು. ಪುರಾತನರ ಲಯಸ್ವರೂಪದ ಅಥವಾ ಜನನ ಮರಣರಾಹಿತ್ಯದ ಮುಕ್ತಿಯು ಈ ಯೋಗದ ಉದ್ದೇಶ

ವಲ್ಲ. ಹೀಗೆ ಆಧಾರಶುದ್ಧಿಯೂ ಅಹಂಕಾರ ನಿರ್ಮು ಕ್ತಿಯೂ ಆದ ಬಳಿಕ ನಿಖಿಲಾನಂದದ ಅವಸ್ಥೆಯು ಬರುತ್ತದೆ. ಆಗ ಜಗದೀಶನ ಹಾಗೂ ಆತ್ಮನ ಉದ್ದೇಶ ಗಳಲ್ಲಿ ಏಕವಾಕ್ಯತೆಯುಂಟಾಗುವದರಿಂದ ಯಾವುದರ ಲ್ಲಿಯೂ ನಿರಾನಂದ ಬೋಧವುಂಟಾಗುವದಿಲ್ಲ. ಇದೇ ಭುಕ್ತಿಯೆಂಬುದು. ಹೀಗೆ ಆಧಾರಗಳ ದೋಷಲೋಪ, ಅಹಂಕಾರ ನಿರ್ಲೇಪ, ಸಕಲ ಸ್ಥಿತಿಗತಿಗಳ ಸಮಾನಂದ ಇವುಗಳ ಮೂಲಕ ಮಾನವನಲ್ಲಿ ನಿಮ್ನ ಪ್ರಕೃತಿಯು ಸಂಪೂರ್ಣ ರೂಪಾಂತರ ಹೊಂದಿ ಊರ್ಧ್ವ ಪ್ರಕೃತಿಯ ದಿವ್ಯತ್ವವು ಪ್ರಕಟವಾಗುತ್ತದೆ. ಆಗಲೇ ದೇವಜೀವನದ ಆರಂಭ. ಇದೇ ಪೂರ್ಣಯೋಗದ ಸಿದ್ಧಿ. ಗುರು ಅರವಿಂದರು ಶುದ್ಧಿ, ಮುಕ್ತಿ, ಭುಕ್ತಿ, ಸಿದ್ಧಿ ಎಂಬ ಈ ನಾಲ್ಕಂಗಗಳಲ್ಲಿ ಮೊಟ್ಟಮೊದಲಿನದಾದ "ಶುದ್ಧಿ" ಎಂಬ ಒಂದಂಗವನ್ನು ಕುರಿತು ಮಾತ್ರವೇ ಪ್ರಸ್ತುತ ಪುಸ್ತಕದಲ್ಲಿ ವಿವರಿಸಿದ್ದಾರೆ. ಇನ್ನು ವೈರಾಗ್ಯ ಹಾಗೂ ಜಗನ್ಮಿಥ್ಯಾವಾದಗಳ ವಿಷಯ. ಪೂರ್ಣಯೋಗಕ್ಕೆ ಇವುಗಳ ಪ್ರಯೋಜನವಿಲ್ಲ. ಲಯಾದಿ ಸ್ವರೂಪದ ಮುಕ್ತಿಗೆ ಅವುಗಳ ಅಗತ್ಯವಿರಬಹುದು. ದೇವಾಧಿ ದೇವನ ದಿವ್ಯಗುಣಧರ್ಮಗಳು ಜೀವನಿಗೆ ಪ್ರಾಪ್ತವಾಗ ಬೇಕಾಗಿರುವ ಈ ಪೂರ್ಣಯೋಗದ "ಸಾಧರ್ಮ್ಯ"

ಮುಕ್ತಿಗೆ ಅವು ಬಾಧಕವಾಗಿವೆ. ಶಕ್ತಿ ಮತ್ತು ಆನಂದ ಇವೇ ಈ ಯೋಗದ ಮುಖ್ಯ ಸಂಪತ್ತು. ಇದಕ್ಕೆ ವಿಪರೀತವಾಗಿರುವ ದುಃಖ ದೌರ್ಬಲ್ಯಗಳ ದಾರಿದ್ರ್ಯವು ಅಜ್ಞಾನಜನಿತವಾಗಿದೆ. ತನ್ನ ದೇವತ್ವದ ಮರವೇ ಇವೆಲ್ಲವುಗಳ ಉಗಮಸ್ಥಾನ. ತನ್ನ ತಾನರಿತಲ್ಲಿ ಇವುಗಳಿಗೆ ನಿಲ್ಲಲಿಕ್ಕೆ ಸ್ಥಳವೇ ಇಲ್ಲ. ಜಗತ್ತಿನಲ್ಲಿ ದುಃಖಕ್ಕೆ ಶಾಶ್ವತ ವತನವೇನೂ ಸಿಕ್ಕಿಲ್ಲ. ಯಾವ ಕಾಲದಲ್ಲಿ ಮಾನವನೊಳಗಿನ ದೇವನು ತನ್ನ ತಾ ಮರೆತು ಅಜ್ಞಾನದ ಲೀಲಾರಸವನ್ನು ಭೋಗಿಸಲೆಳಸುವನೋ ಅಂಥಕಾಲದಲ್ಲಿ ಮಾತ್ರ ದುಃಖಕ್ಕೆ ರಾಜಪಟ್ಟವು ಬಂದಿರುತ್ತಿರುತ್ತದೆ. ತಿರುಗಿ ಆತನು ಯಾವಾಗ ತನ್ನ ತಾನರಿತು ದಿವ್ಯತ್ವವನ್ನು ಪ್ರಕಟಗೊಳಿಸಿಕೊಳ್ಳುವನೋ ಆಗ ಸತ್ಯಯುಗದ ಪ್ರಭಾತ ಗೀತಲಹರಿಯು ಜಗತ್ತನ್ನು ಆನಂದವಾರಿಧಿಯಲ್ಲಿ ತೇಲಾಡಿಸಲೇಬೇಕು. ಜಗತ್ತಿನಮೇಲೆ ಇಂಥ ಸ್ವರ್ಗೀಯ ಸತ್ಯಯುಗವನ್ನು ಪ್ರವರ್ತಗೊಳಿಸುವದಕ್ಕಾಗಿ ಸರ್ವದಾ ಕರ್ಮನಿರತನಾಗಿರಬೇಕಾದುದೇ ಪೂರ್ಣಯೋಗಿಯ ಮಹಾವ್ರತ. ಅಂತಲೇ ಗುರು ಅರವಿಂದರು ನೈಷ್ಕರ್ಮ್ಯವನ್ನು ನಿಷೇಧಿಸಿ " ನ ಮೇ ಮತಂ ತಸ್ಯ ದುರ್ಬಲಸ್ಯ "( ನಾನಂಥ ದುರ್ಬಲದ ವಿಚಾರದವನಲ್ಲ) ಎಂದು ಭಗವಾನ್ ಶ್ರೀಕೃಷ್ಣನಂತೆ ಘಂಟಾಘೋಷವಾಗಿ ಸಾರಿದ್ದಾರೆ.

ಹೇಳಬೇಕಾಗುದುದನ್ನೆಲ್ಲ ಹೇಳಿ ಮುಗಿಸಿದ್ದೇನೆ. ಉಪಸಂಹಾರದಲ್ಲಿ ಒಂದು ಮಾತನ್ನು ಮಾತ್ರವೆ ಹೆಚ್ಚಿಗೆ ಹೇಳುವೆನು. ನಾನು ನಿಮಗೆ ಇತ್ತದ್ದು ನಿಮ್ಮ ನೈಜದ ವಿಷಯದಲ್ಲಾಗಲಿ, ಯೋಗದ ವಿಷಯದಲ್ಲಾಗಲಿ ಸಂಪೂರ್ಣಜ್ಞಾನವೆಂದು ನೀವು ತಿಳಿಯುಬಾರದು. ತಿರುಗಿ ಕೇಳಿದರೆ ಕೇವಲ ಒಂದಾನೊಂದು ವಿಶಿಷ್ಟಭೂಮಿಕೆಯಲ್ಲಿ ಅಗತ್ಯವಿರುವ ಕೆಲವೊಂದು ಪೂರ್ವಸೂಚನೆಗಳು ಮಾತ್ರವೇ ನಿಮಗೆ ಕೊಡಲ್ಪಟ್ಟಿರುತ್ತವೆ. ಮುಖ್ಯವಾಗಿ ಯೋಗದ **ಪ್ರಥಮಪಾದ**ವಾಗಿರುವ **ಶುದ್ಧೀಕರಣಕ್ಕೆ** ಅವುಗಳ ಮಹತ್ವವಿದೆ.

ಶುದ್ಧಿಯು ಪೂರ್ಣವಾದ ಬಳಿಕ ಮುಕ್ತಿ ಅಥವಾ ಮುಕ್ತತೆಯನ್ನು ಪೂರ್ಣಗೊಳಿಸಿಕೊಳ್ಳಬೇಕಾಗುತ್ತದೆ. ಶುದ್ಧಿಯ ಅನಂತರ ಅದು ಸುಲಭ; ತತ್ಪೂರ್ವದಲ್ಲಿ ಅಶಕ್ಯ.

ಮುಕ್ತಿಯೆಂದರೆ ಲಯವೆಂದು ನನ್ನ ಅರ್ಥವಲ್ಲ. ಅಂತಹದು ಅನುಸರಿಸಲೂ, ಅಭಿಲಾಷಿಸಲೂ ಅರ್ಹವಾದುದಲ್ಲ. ಅಂತಹ ಮುಕ್ತಿಯು ಈಶಚಿತ್ತಾಧೀನವಾದದ್ದು. ಅಲ್ಲಿಯವರೆಗೆ ಕಾದು ಕೊಂಡಿರಬೇಕಾಗುತ್ತದೆ. ಆದರೆ ಅಜ್ಞಾನ, ಅಹಂಕಾರ, ದ್ವಂದ್ವ ಇವುಗಳಿಂದ ಬಿಡುಗಡೆ ಹೊಂದುವುದು ನನ್ನ ಮುಕ್ತಿಯ ಅರ್ಥ.

ಶುದ್ಧೀಕರಣವು ಬೆಳೆಬೆಳೆದ ಹಾಗೆ ಮುಕ್ತತೆಯ ಕಡೆಗೆ ನೈಸರ್ಗಿಕ ಓಘವುಂಟಾಗುವದ; ಹಾಗೇ ಮುಂದುಮುಂದಿನ ಭೂಮಿಕೆಗಳಾದ ಭುಕ್ತಿ ಅಥವಾ ಮುಕ್ತ ಭೋಗ, ಹಾಗೂ ಸಿದ್ಧಿ ಅಥವಾ ಮುಕ್ತ ಪರಿಪೂರ್ಣತೆ ಇವುಗಳ ವಿಷಯದಲ್ಲಿ ಸಹ ಸ್ವಾಭಾವಿಕ ಪ್ರವೃತ್ತಿಯುಂಟಾಗುವದು. ನೀವು ಮುಂದುವರಿದ ಹಾಗೆಲ್ಲ ನಿಮ್ಮ ರೀತಿಯನ್ನು ಬದಲಿಸಬೇಕಾಗುವದು. ಆದರೆ ಆಮೂಲಾಗ್ರವಾಗಿಯೇನೂ ಅಲ್ಲ; ಕೆಲಕೆಲವು ಮಹತ್ವದ ವಿಷಯಗಳಲ್ಲಿ ಮಾತ್ರ. ಅಪರೂ ನಾನು ಆ ವಿಷಯದಲ್ಲಿ ನಡುವೆ ಬಾಯಿ ಹಾಕಲಾರೆನು. ಯಾಕೆಂದರೆ ಒಂದು ಹೊತ್ತಿಗೆ ಒಂದನ್ನೇ ಮಾಡುವುದು ಒಳ್ಳೆಯದು.

ನಾನು ಬರೆದದ್ದರಲ್ಲೆಲ್ಲ ನಿಮ್ಮೊಳಗಿನ ಬಹುಜನರಿಗೆ ಅಭ್ಯಾಸ ವಿಲ್ಲದ ಒಂದು ದೃಷ್ಟಿಕೋನವನ್ನು ಸ್ವೀಕರಿಸಿದ್ದೇನೆ. ವೈರಾಗ್ಯವೇ ಸಮಸ್ತಜ್ಞಾನದ ಆರಂಭವೆಂದು ನೀವು ಲಕ್ಷಿಸುವಿರಾದರೆ ನನ್ನೊಡನೆ ನಿಮಗೆ ತೃಪ್ತಿಯಾಗದು. ನನ್ನ ಅಭಿಪ್ರಾಯದಲ್ಲಿ ವೈರಾಗ್ಯವು ಕೇವಲ ತಾತ್ಪೂರ್ತಿಕ ಪ್ರಯೋಜನವುಳ್ಳ ಮಾನಸ ಅವಸ್ಥೆಯಾಗಿದೆ. ಪೂರ್ವ ಸಂಸ್ಕಾರಗಳು ಕೇವಲ ಅಭ್ಯಾಸಕ್ಕೆ ಹಣಿಯದೆ ಅತಿಶಯವಾಗಿ ಒರಟುತನವನ್ನು ನಡಿಸಿದರೆ ಅಂಥ ಸಂದರ್ಭದಲ್ಲಿ ಮಾತ್ರ (ಪಿಂಡಸ್ಥ-) ದೇವನು ದೋಷನಿರಸನ ವಿಧಾನವನ್ನು ಬಲಪಡಿಸಲಿಕ್ಕೆಂದು ಅದನ್ನು ಉಪಯೋಗಿಸಿಕೊಳ್ಳುತ್ತಾನೆ. ಜ್ಞಾನವೇ ಶುದ್ಧಿ ಮತ್ತು ಮುಕ್ತಿಗೆ ಆವಶ್ಯಕ ವಸ್ತುವಾಗಿದೆ, ಆದರೆ ಮನವು ಶಾಂತವಾಗಿ ಜ್ಞಾನದ ಸ್ವಂತ ಕ್ರಿಯೆಗೆ ಅನುಕೂಲವಾಗುವವರೆಗೆ ಜ್ಞಾನಕ್ಕೆ ಅಭ್ಯಾಸ ಇಲ್ಲವೆ ವೈರಾಗ್ಯ ಪುಷ್ಟೀಕರಣದ ಆಗತ್ಯವಿರುತ್ತದೆ. ಮನವು ಶಾಂತವಾ ದೊಡನೆ ಮತ್ತು ಅದರ ಪೂರ್ವೋದ್ಯಮಕ್ಕೆ ಹೊರಗಿನಿಂದ ಲಭಿಸುವ ನವಚೇತನಗಳಿಗೆ ಅದು ಸ್ಫುರಣಗೊಳ್ಳದಂತಾದೊಡನೆ ಜ್ಞಾನವು ವಿಕಾಸ ಹೊಂದುವದು, ಮತ್ತು ಶಕ್ತಿಯು ತನ್ನ ನಿರ್ಧಾರಿತ ಕಾರ್ಯ ವನ್ನು ತಡವರಿಸದೆ ಮಾಡಲಾರಂಭಿಸುವದು. ಆ ಮೇಲೆ ನಿಮಗೆ ಸಾಧನೆಯೆಂಬುದೇ ಇಲ್ಲ. ಕೇವಲ ಪ್ರಗತಿಪರ ಸಿದ್ಧಿಯು ಯಾವ ಕಲ್ಪಿತಪದ್ಧತಿಗಳ ಆಗತ್ಯವೂ ಇಲ್ಲದೆ, ಮಾನವನ ಶ್ವಾಸಪ್ರಶ್ವಾಸ ಹಾಗೂ ಆಹಾರವಿಹಾರಗಳಂತೆ ಸುಲಭವೂ ಸ್ವಾಭಾವಿಕವೂ ಆದ ಪ್ರಕೃತಿ ನಿಯಮಗಳಿಂದಲೇ ವೃದ್ಧಿಂಗತವಾಗುವದು. ಅಭ್ಯಾಸದ ಇಲ್ಲವೆ ವೈರಾಗ್ಯದ ಸಮಸ್ತ ಆಗತ್ಯವು ತಪ್ಪಿಹೋಗುವದು. **ವೈರಾಗ್ಯದ ಮೇಲಿನ ಮೋಹವೂ ಕೂಡ ಲೋಭದ ಮೇಲಿನ ಮೋಹದಷ್ಟೇ ಅಪಾಯಕಾರಕವಾಗಿದೆ.**

ಇದಲ್ಲದೆ ಬೌದ್ಧರಂತೆ ಜೀವನವೆಂಬುದು ಆತ್ಯಂತಿಕ ದುಃಖಾ ವಸ್ಥೆಯಾಗಿದೆಯೆಂದೂ, ಕೆಲವೊಂದು ರೀತಿಯಿಂದ (ಎಣ್ಣೆ ತೀರಿದ

ದೀಪದಂತೆ) ಆರಿ ಹೋಗುವುದೇ ಪರಮೋತ್ತಮ ಅವಸ್ಥೆಯಾಗಿದೆ ಯೆಂದೂ ನೀವು ತಿಳಿಯುತ್ತಿದ್ದರೆ, ಅಥವಾ ಮಾಯಾವಾದಿಗಳಂತೆ ಈ ಜಗತ್ತಿಗೆ ನಾವು ಬಂದದ್ದರ ತಾತ್ಪರ್ಯವು ಶಕ್ಯವಿದ್ದಷ್ಟು ಅವಸರ ದಿಂದ ಅದರೊಳಗಿಂದ ಪಾರಾಗುವುದಕ್ಕೇ ಎಂದು–(ಒಂದು ಕಥೆಯೊಳ ಗಿನ) ವಿಖ್ಯಾತ ಸೇನಾಪತಿಯೊಬ್ಬನು ತನ್ನ ಮಹಾ ಸೈನ್ಯಕ್ಕೆ ಬೇಗನೆ ಹಿಂದಿರುಗುವುದೇ ಮುಖ್ಯೋದ್ದೇಶವಾಗಿಟ್ಟುಕೊಂಡು ಗುಡ್ಡವನ್ನೇ ರಲು ಅಪ್ಪಣೆ ವಿಧಿಸಿದ ಹಾಗೆ–ನೀವು **ಭಾವಿಸಿದ್ದರೆ ನನ್ನ ಬಳಿ ಯಿಂದ ದೂರ ಹೋಗುವುದೇ ನಿಮಗೆ ಒಳ್ಳೆಯದು. ನಾನು (ವೇದಾಂತಿಯಲ್ಲ;) ತಾಂತ್ರಿಕನಿದ್ದೇನೆ.** ಜಗತ್ತು ಆನಂದ ದೊಳಗಿಂದ ಉದ್ಭವಿಸಿ, ಆನಂದದ ಮೂಲಕ ಜೀವಿಸಿ, ಆನಂದದ ನಿಟ್ಟಿನಿಂದ ಆನಂದದೆಡೆಗೆ ಸಾಗುತ್ತಿದೆಯೆಂದು ನಾನು ತಿಳಿಯುತ್ತೇನೆ.

ಆನಂದ ಮತ್ತು ಶಕ್ತಿ ಇವೆರಡೇ ಇರುವಿಕೆಯ ಸತ್ಯಸಂಜ್ಞೆ ಗಳು. ದುಃಖವೂ ದೌರ್ಬಲ್ಯವೂ ಅಜ್ಞಾನಜನಿತ ವಿಕಾರಗಳಾಗಿವೆ. ಉಚ್ಚವಾದ ಹಾಗೂ ಸತ್ಯವಾದ ಆತ್ಮವನ್ನು ಮರೆತಲ್ಲಿಯೇ ಅವುಗಳ ಉತ್ಪತ್ತಿ. ಇವು ಸಾರ್ವತ್ರಿಕವೂ ಸನಾತನವೂ ಆದ ವಸ್ತುಗಳಲ್ಲ. ಆದರೆ ಪ್ರಾದೇಶಿಕವೂ ಸಾಮಯಿಕವೂ ಆಗಿವೆ. ಪ್ರಾದೇಶಿಕವೆಂದರೆ ಮುಖ್ಯವಾಗಿ ಈ ಪೃಥಿವಿಯ ಮೇಲೆ; ಸಾಮಯಿಕವೆಂದರೆ ಕಲಿ ಯುಗದ ಸಂಕುಚಿತ ಸಮಯಗಳಲ್ಲಿ. **ಭೂಮಂಡಲದ ಮೇಲೆ ನಮಗಾಗಿಯೂ ಮಾನವಕೋಟಿಗಾಗಿಯೂ ಸ್ವರ್ಗವನ್ನು ಇಳಿಸಿ ತರುವುದೇ ನಮ್ಮ ಉದ್ಯಮವು; ಮತ್ತು ದುಃಖ ದೌರ್ಬಲ್ಯಗಳನ್ನು ಅವುಗಳಿಗೀಗ ಇರಲಿಕ್ಕೆ ಒಪ್ಪಿಗೆ ಸಿಕ್ಕಿ ರುವ ಸ್ಥಾನಕಾಲಗಳ ಪುಟ್ಟ ಮಾಲೆಗಳೊಳಗಿಂದ ಎಬ್ಬಿಸಿ ಓಡಿಸುದೇ ನಮ್ಮ ಕಾರ್ಯಕಲಾಪವು.**

ಜಗತ್ತು ದುಃಖಮಯವಾಗಿದೆಯೆಂದೂ, ನೈಷ್ಕರ್ಮ್ಯ ಮತ್ತೂ ಪಲಾಯನ ಇವೇ ಆನಂದ ಮತ್ತು ವಿಮೋಚನೆ ಇವುಗಳಿಗೆ ಏಕ

ಮಾತ್ರ ಉಪಾಯಗಳಾಗಿವೆಯೆಂದೂ ಬೋಧಿಸುವ ತೇಜೋಹೀನ ತತ್ವವಾದವನ್ನು ನಾನು ಅನುಮೋದಿಸುವದಿಲ್ಲ. ದೇವನು ತನ್ನ ಸ್ವಯಂ ಸ್ಥಿತಿಯಲ್ಲಿ ಮಾಂಗಲ್ಯಮಯನಾಗಿದ್ದು, ವಿಸ್ತಾರದಶೆಯಲ್ಲಿ ಆತನೇ ಅಮಂಗಲಕರನಾಗಿದ್ದಾನೆಂದು ಹೇಳುವುದು ಸಮಸ್ತ ತರ್ಕಕ್ಕೂ ಜ್ಞಾನಕ್ಕೂ ವಿರುದ್ಧವಾಗಿದೆ. ಬ್ರಹ್ಮನು ಮೂಢನೂ, ಮತ್ತನೂ ಆಗಿ ದುಃಸ್ವಪ್ನಗಳನ್ನು ಕಾಣುತ್ತ ಕಷ್ಟಕರವಾದ ಮಾಯೆಯಲ್ಲಿ ಸ್ವಯಂಭ್ರಮಿತನಾಗಿದ್ದಾನೆಂದು ಹೇಳುವುದನ್ನು ನಾನು ಒಪ್ಪಿಕೊಳ್ಳಲಾರೆನು,

ಆ ಬೋಧನೆಯನ್ನು ನಾನು ವೇದದಲ್ಲಿ ಕಂಡಿಲ್ಲ; ಅಲ್ಲದೆ ನನ್ನ ವಾಸನಾರಹಿತ ಅಲೌಕಿಕ ಸಾಧನ ಜನಿತ ಅಬಾಧಿತ ಆನಂದ ಹಾಗೂ ಜ್ಞಾನದ ಮೂರ್ತಸ್ವರೂಪವಾಗಿರುವ ದಿವ್ಯಾನುಭೂತಿಗಳಿಗೂ ಅದು ಸರಿ ಹೊಂದುವದಿಲ್ಲ. **ನಾನು ಮಹಾಭಾರತದೊಳಗಿನ ಶ್ರೀ ಕೃಷ್ಣನ ವಿಚಾರದವನಿದ್ದೇನೆ.** ಆತನು ಹೇಳುವುದೇನೆಂದರೆ— "ಕೆಲವರು ಈ ಜಗತ್ತಿನಲ್ಲಿ ಕಾರ್ಯಪರತೆಯನ್ನು ಬೋಧಿಸುತ್ತಾರೆ; ಕೆಲವರು ನೈಷ್ಕರ್ಮ್ಯವನ್ನು ಬೋಧಿಸುತ್ತಾರೆ. ಆದರೆ **ನೈಷ್ಕರ್ಮ್ಯವನ್ನು ಬೋಧಿಸುವ ದುರ್ಬಲರ ಅಭಿಪ್ರಾಯದವನು ನಾನಲ್ಲ." ನ ಮೇ ಮತಂ ತಸ್ಯ ದುರ್ಬಲಸ್ಯ.**

ಆದರೆ ಆತನು (ಶ್ರೀಕೃಷ್ಣನು) ಆದರ್ಶವಾಗಿ ಇಟ್ಟುಕೊಂಡ ಕರ್ಮವು, ಗೆಟೇ ಎಂಬವನು ಮಹತ್ತರವಾದ ನಿಸರ್ಗಶಕ್ತಿಗಳ ಕರ್ಮವನ್ನು ಕುರಿತು ಹೇಳುವಂತೆ—ಆಸಕ್ತಿರಹಿತರೂ, ಕ್ಲೇಶರಹಿತರೂ, ಆನಂದದಲ್ಲಿ ಸ್ವಯಂಸಮತೋಲರೂ, ಸಾತ್ವಿಕ ಅಹಂಕಾರದಿಂದ ಸಹ ಬದ್ಧರಲ್ಲದವರೂ, ಬಹುತ್ವದಲ್ಲಿದ್ದೂ ಪುರುಷೋತ್ತಮನೊಂದಿಗೆ ಏಕತ್ವವನ್ನು ಸಾಧಿಸಿದವರೂ ಆದ ಮಹತ್ತರವಾದ ದೇವತೆಗಳ ಕರ್ಮವೇ ಆಗಿದೆ.

ನನ್ನ ಜೀವನವು ಆ ದೇವನ ಜೀವನದಲ್ಲಿ. ನನ್ನ ಶಕ್ತಿಯು ಆತನ ಅನಂತ ಶಕ್ತಿಸ್ವರೂಪಗಳಾದ ಮಹಾ ಕಾಲಿಯದೇ ಒಂದು ವಿಶಿಷ್ಟ ಕೃತಿ ಮಾತ್ರ. ನಾನು ಅಜ್ಞನಲ್ಲ, ನಾನು ಬದ್ಧನಲ್ಲ, ನಾನು ದುಃಖಿಯಲ್ಲ. ಕೇವಲವಾಗಿ ನಾನು ಅಜ್ಞನಾದಂತೆ ನಾಟಕವನ್ನಾಡುತ್ತಿದ್ದೇನೆ. ಬದ್ಧನಾದಂತೆ ನಟನೆ ಮಾಡುತ್ತಿದ್ದೇನೆ. ನಟನಂತೆ ಅಥವಾ ಪ್ರೇಕ್ಷನಂತೆ ನಾನು ಕೇವಲ ದುಃಖದ ರಸವನ್ನು ಮಾತ್ರ ಗೃಹಣ ಮಾಡುತ್ತಿದ್ದೇನೆ. ನನಗೆ ಸಾಕಾದಾಗ ನಾನದನ್ನು ಬಿಸಾಡಬಲ್ಲೆನು. ಯಾವನು ನನ್ನನ್ನು ಪಾಪಿಯೆಂದೂ ಪತಿತನೆಂದೂ ಕರೆಯುವನು? ಭೂಮಿಯ ಮೇಲೆ ಹರಿದಾಡುವ ಹಲವು ಹುಳಗಳಲ್ಲಿ ನನ್ನನ್ನೂ ಒಂದು ಹುಳವೆಂದು ಯಾವನು ಹೇಳುವನು? ನಾನು ಬ್ರಹ್ಮನಿದ್ದೇನೆ; ನಾನು ಆತನಿದ್ದೇನೆ; ಪಾಪವು ನನ್ನನ್ನು ಸ್ಪರ್ಶಿಸಲಾರದು. ಯಾರು ನನ್ನನ್ನು ದುರ್ಬಲನೆಂದು ಹೇಳುವರು? ನಾನು ಸರ್ವಸಮರ್ಥನೊಂದಿಗೆ ಏಕಾತ್ಮನಿದ್ದೇನೆ. ಆತನು ಏಕಮಾತ್ರನಾಗಿದ್ದರೂ ತಾನೇ ಬಹುವಾಗುವುದನ್ನು ಸ್ವೀಕರಿಸಿದ್ದಾನೆ. ಆತನು ಅನಂತನಾಗಿದ್ದರೂ ತಾನೇ ಬಹು ಕೇಂದ್ರಗಳಲ್ಲಿ ಸೀಮಾಬದ್ಧನಾಗಿದ್ದು ಪ್ರತಿಕೇಂದ್ರದಲ್ಲಿ ಪುನಃ ಅನಂತನಾಗಿಯೇ ಇದ್ದಾನೆ. ಸತ್ತಾಸ್ಥಿತಿಯ ಗೂಢರಹಸ್ಯವು ಇದಾಗಿದೆ. ಉತ್ತಮಂ ರಹಸ್ಯಮ್. ದೇವನ ಮಹತ್ತರವೂ, ಅಗಾಧವೂ, ಆನಂದಪೂರ್ಣವೂ ಆದ ರಹಸ್ಯವಿದು. **ತರ್ಕವು ದೂಡುವಂಥ, ಜ್ಞಾನವು ಗೃಹಿಸುವಂಥ ರಹಸ್ಯವಿದು. ಇದನ್ನು ಗೃಹಿಸುವಂಥ ಜ್ಞಾನವು ಅನುಮಾನಿಸಲ್ಪಡುವಂತಹದಲ್ಲ, ಅನುಭವಿಸಲ್ಪಡುವಂತಹದು.** ಈ ರಹಸ್ಯವು ಪ್ರತೀತಿಯಿಂದ ಪ್ರಮಾಣಿಸಲ್ಪಡುವದು. ಶುದ್ಧವಾದ, ವಿಮುಕ್ತವಾದ, ಸಕಲಾನಂದಪೂರ್ಣವಾದ, ನಿಖಿಲಪರಿಪೂರ್ಣತಾಯುಕ್ತವಾದ ಅಂತರಾತ್ಮದಿಂದ ಪ್ರಮಾಣೀಕರಿಸಲ್ಪಡುವದು.



# ೧೦ ಪರಿಶೇಷ

ಪ್ರಕರಣೋಪಕ್ರಮಣಿಕೆ:—

"ಶಕ್ತಿ" ಗೆ ಹೋರಾಟ ಅಥವಾ ಪ್ರಯತ್ನವು ಬಾಧಕವೆಂದು ಗುರು ಅರವಿಂದರು ಹೇಳುವುದರ ಅರ್ಥವು ಪ್ರಯತ್ನಕ್ಕೆ ತಿಲಾಂಜಲಿಯನ್ನೇ ಕೊಟ್ಟುಬಿಡಬೇಕೆಂಬುದಲ್ಲ. ಒಳಗಿನ "ಪುರುಷ" ನು ಶಾಂತನಾಗಿದ್ದುಕೊಂಡು ತನ್ನ "ಶಕ್ತಿ" ಯಾದ "ಪ್ರಕೃತ ದೇವಿ" ಗೆ ಆಜ್ಞೆಯನ್ನು ವಿಧಿಸುತ್ತ ಅವಳಿಂದ ಕಾರ್ಯವನ್ನು ಮಾಡಿಸುತ್ತಲಿರಬೇಕೇ ವಿನಾ ಸ್ವಂತ ತಾನು ಕಾರ್ಯಾಸಕ್ತನಾಗಿ ಅವಳ ಬಲವನ್ನು ಜಂಗುಹಿಡಿಸಿ ಅದರಿಂದ ತಾನೂ ಅನೀಶನಾಗಿ ಒದ್ದಾಡಬಾರದು; ಅಥವಾ ಶಕ್ತಿಯು ತಾನೂ ಪುರುಷನಂತೆ ಶಾಂತಿಗೆ ಬಲಿಬಿದ್ದು ನಿಷ್ಕ್ರಿಯಳಾಗಿ ಜೀವನವನ್ನು ಸ್ಮಶಾನ ಮಾಡಬಾರದು; ಎಂಬುದಿಷ್ಟೇ ಆ ಮಾತಿನ ಅಭಿಪ್ರಾಯ. ಸದಾ ಸರ್ವಕಾಲವೂ ಪುರುಷನ ಅಧ್ಯಕ್ಷತೆಯಲ್ಲಿ ಪ್ರಕೃತಿ ದೇವಿಯು ಕಾರ್ಯಪರಳಾಗಿರತಕ್ಕದ್ದು. ಇದರ ವಿಪರೀತಸ್ಥಿತಿಯು ಸಚ್ಚಿದಾನಂದಮಯ ಮೋಕ್ಷಕ್ಕೆ ಆದರ್ಶವೆಂದು ಗೃಹಿಸಲ್ಪಡುವದಾದರೂ ಜೀವನಯೋಗಕ್ಕೆ ಅದು ಬಾಧಕವಾಗಿದೆ.

ಆದರಿಂದ ಜೀವನವು ಬೂದಿಬಡಕ ಸನ್ಯಾಸಿಗಳ ಮಳಿಗೆಯಾಗಿ ಬಿಡುತ್ತದೆ. ಸಮಸ್ತ ಮಾನವಕೋಟಿಗೆ ಸಂಬಂಧಿಸಿದ ಅಧ್ಯಾತ್ಮದಲ್ಲಿ ಪುರುಷನೂ ಪ್ರಕೃತಿಯೂ ತಮ್ಮ ತಮ್ಮ ಧರ್ಮದಲ್ಲಿ ತಾವು ನಿರತರಾಗಿರಲಿಕ್ಕೆ ಬೇಕಾಗುತ್ತದೆ. ಪುರುಷನ ಶಾಂತ ಧೀರತೆಯೂ, ಶಕ್ತಿಯ ಉಜ್ವಲ ಧುರಂಧರತೆಯೂ ಕೈ ಕೈ ಹಿಡಿದು ತಾಂಡವವನ್ನು ಆಡುತ್ತಲಿರಬೇಕು. ಆವಾಗಲೇ ದೇವಜೀವನ. ಪ್ರಯತ್ನವು ಪ್ರಕೃತಿದೇವಿಯ ಕೆಲಸ. ಅದರಲ್ಲಿ ಪುರುಷನು ಲಿಪ್ತನಾಗಬಾರದು, ಹಾಗೂ ಪ್ರತ್ಯೇಕ ಯಂತ್ರಗಳು ತಮ್ಮ ತಮ್ಮ ನಿರ್ದಿಷ್ಟ ಕಾರ್ಯವನ್ನು ಬಿಟ್ಟು ಅವಳ ಈ ಕಾರ್ಯದಲ್ಲಿ ಕೈಹಾಕಬಾರದು. ಒಳಗೆ ವೀರ ಸಮತೆಯೂ ಹೊರಗೆ ಧೀರ ಪ್ರಯತ್ನವೂ ಇರಬೇಕೆಂಬುದೇ ಮೂಲಸೂತ್ರದ ಪರಮರಹಸ್ಯ. ಹೀಗೆ "ಪ್ರಕೃತಿ" ಅಥವಾ "ಶಕ್ತಿ"ಯ ಕಾರ್ಯಕಾರಿತ್ವದ ಮೂಲಕವೇ ಪೂರ್ಣಯೋಗಕ್ಕೆ ಗ್ರಂಥಾರಂಭದಲ್ಲಿ ಶಕ್ತಿಪಥವೆಂದು ಹೇಳಲಾಗಿದೆ. ಹೋರಾಟವು ಆನಂದಲಹರಿಯಾಗಿರದೆ ಅದು ನಿರಾನಂದ ಹಾಗೂ ಅಧೀರತೆಯ ಮೂಲಕ ಹುಟ್ಟುವ ಅಸ್ಥೈರ್ಯವೇ ಆಗಿರುತ್ತದೆ. ಇದು ನಮ್ಮ ಧ್ಯೇಯವಲ್ಲ. ಇನ್ನು ಶಕ್ತಿ-ಶಕ್ತಿ ಎಂಬ ಗರ್ಜನೆಯು ವೈಯ್ಯಕ್ತಿಕ ಉದ್ದಾಮ ನಿರಂಕುಶತೆಯನ್ನು ಸಾರುವ

ದೆಂದು ಭಾವಿಸಕೂಡದು. ಅಂಥ ಶಕ್ತಿಯು ಆಸುರಿಕವಾಗಿರುತ್ತದೆ. ಅದು ಜಗತ್ತಿನಲ್ಲಿ ಸ್ವರ್ಗಕ್ಕೆ ಪ್ರತಿಯಾಗಿ ನರಕವನ್ನು ನಿರ್ಮಿಸುತ್ತದೆ. ದೇವತೆಗಳಿಗಿಂತಲೂ ದೈತ್ಯರು ಬಲಿಷ್ಠರೆಂಬುದು ನಿಜ. ಆದರೆ ದೇವಾಧಿದೇವನು ಆ ದೈತ್ಯರ ದರ್ಪವನ್ನೂ ಸಹ ಮುರಿಯುವಂಥ ಸರ್ವಸಮರ್ಥನಿರುತ್ತಿರುತ್ತಾನೆ. ನಮ್ಮೊಳಗೆ ಪ್ರಕಟವಾಗಬೇಕಾದುದು ದೈತ್ಯರ ಶಕ್ತಿಯೂ ಅಲ್ಲ, ದೇವತೆಗಳ ಶಕ್ತಿಯೂ ಅಲ್ಲ; ಪ್ರತ್ಯಕ್ಷ ದೇವಾಧಿದೇವನ ಶಕ್ತಿಯು ಪ್ರಕಟವಾಗಬೇಕಾಗಿದೆ. ಹೀಗೆ "ಸಂಕಲ್ಪಶಕ್ತಿ" ಯನ್ನು ಕೆಳಗೆ ಇಳಿಸಬೇಕೆಂಬುದರ ಅರ್ಥವು ವೈಯಕ್ತಿಕ ಇಚ್ಛೆಯನ್ನು ಸಫಲಗೊಳಿಸುವುದೆಂತಲ್ಲ. ವಿಶ್ವೇಶ್ವರನ ಹಾಗೂ ಆತನ ಲೀಲಾಂಶನಾದ ಪಿಂಡಸ್ಥ ಪರಮಾತ್ಮನ ಸಂಕಲ್ಪದಲ್ಲಿ ಅಂತರವಿರಲಾರದಷ್ಟೆ? ಅದಕ್ಕೆ ಕೆಳಗಿನ ಜೀವವು ಹೊಂಗೂಡಿಸತಕ್ಕದ್ದು. ಆಗ ಜೀವತ್ವವು ದೇವತ್ವವಾಗಿ ಪರಿಣಮಿಸುವದು. ಆಗ ಜೀವನಾಧಾರದಲ್ಲಿ ಅಂಥ ಪ್ರಯತ್ನಕ್ಕೆ ಪ್ರತಿಯಾಗಿ ಅವಿಕಲ ಕೃತುಶಕ್ತಿಯು ನೆಲೆಯಾಗಿ ನಿಲ್ಲುವದು. ನಾವು ನಮ್ಮ ಮನಬಲ್ಲಂತೆ ಮಾಡುವುದಕ್ಕೆ ತಕ್ಕ ಶಕ್ತಿಯನ್ನು ಗಳಿಸಬೇಕಾಗಿಲ್ಲ. ನಮ್ಮೊಳಗಿನ ಈಶ್ವರನ ಸತ್ಯಸಂಕಲ್ಪಕ್ಕೆ ನಮ್ಮ ಜೀವನವು ಸಮಸ್ವರದಲ್ಲಿ ಆಲಾಪನೆಗೈಯಬೇಕಾದುದೇ ನಮ್ಮ ಯೋಗೋದ್ಯಮವಾಗಿದೆ. ಇದೀಗ ಅಲ್ಲಲ್ಲಿ ಹಲಕೆಲವರು

ಜಾಗತಿಕ ಕೋಲಾಹಲದಲ್ಲಿ ಭಾಗವಹಿಸುವದಕ್ಕೆಂದು ಅಲೌಕಿಕ ಯೋಗಸಿದ್ಧಿಗಳನ್ನು ಸಾಧಿಸಬೇಕೆಂದು ಅಪೇಕ್ಷಿಸುತ್ತಿರುವಂತೆ ತೋರುತ್ತದೆ. ಆದರೆ ಪೂರ್ಣಯೋಗದ ಸಾಧಕನ ಮಾರ್ಗವು ಇದಲ್ಲ. ಜಗತ್ತಿನಲ್ಲಿ ಕೋಲಾಹಲಗಳೇಳುವುದರೊಳಗೆ ಜಗದೀಶನ ಸತ್ಯಸಂಕಲ್ಪವು ಏನಿದೆಯೆಂಬುದನ್ನರಿಯದೆ ತಮ್ಮ ವೈಯಕ್ತಿಕ ವಿಕಾರಗಳಿಗೆ ಬಲಿಬಿದ್ದು ಆ ವಿಕಾರಗಳು ಸಫಲವಾಗುವದಕ್ಕೆ ಯೋಗಸಿದ್ಧಿಗಳ ಬೆಂಬಲವನ್ನು ಬಯಸುವವರು ಪೂರ್ಣಯೋಗದ ಸಾಧನೆಗೆ ಅನಧಿಕಾರಿಗಳು. ವಿಕಾರಪೂರ್ಣನಾದ ಜೀವನಿಗೆ ಸತ್ಯದ ಅರಿವಿಲ್ಲ. ನಿರ್ವಿಕಾರನಾದ ಪುರುಷನಿಗೆ ಅದರ ಪೂರ್ಣ ಪ್ರತೀತಿಯುಂಟು. ಇಂಥ ಸತ್ಯಪ್ರತೀತಿಯಿಂದ ಕೂಡಿದ ಕೃತುಶಕ್ತಿಯು ನಮಗೀಗ ಬೇಕಾಗಿದೆಯೇ ವಿನಾ ವೈಯಕ್ತಿಕ ನಿರಂಕುಶತ್ವದ ಅಗತ್ಯವು ನಮಗಿಲ್ಲ. ಹೀಗಿರುವದರಿಂದ ನಮ್ಮ ಊರ್ಧ್ವಶಕ್ತಿಯನ್ನು ಮೊದಲಿಗೆ ನಮ್ಮ ನಿಮ್ಮ ಪ್ರಕೃತಿಯ ದೋಷಗಳನ್ನು ಸಾವಧಾನದಿಂದ ಕಿತ್ತಿಹಾಕುವದಕ್ಕೆ ಪ್ರಯೋಗಿಸಬೇಕೇ ಹೊರತು ಒಮ್ಮೆಲೆ ಬಾಹಿರಂಗಿಕ ಜೀವನದ ಮಹತ್ತರವಾದ ಘಟನೆಗಳಿಗಾಗಿ ಅದನ್ನು ಬಳಸಬಾರದು. ನಮ್ಮ ನಿಮ್ಮ ಪ್ರಕೃತಿಯ ಶುದ್ಧೀಕರಣವೆಂದರೆ ಅದೇನು ಸಣ್ಣಪುಟ್ಟ ಕೆಲಸವಿಲ್ಲ. ತಿರುಗಿ ಕೇಳಿದರೆ ಇದೇ ಅತ್ಯಂತ

ದುರ್ಧರವಾಗಿದೆ. ಇದಕ್ಕೆ ಕಾಲವೂ ಅಷ್ಟಿಷ್ಟಾದರೆ ಸಾಕೆನ್ನುವಂತಿಲ್ಲ. ಬಹುಕಾಲದ ವರೆಗೆ ಏಕನಿಷ್ಠನಾಗಿ ಊರ್ಧ್ವಶಕ್ತಿಯನ್ನು ಹತೋಟಿಯಿಂದ ಪ್ರಯೋಗಿಸುತ್ತಿದ್ದರೆ ಆಗಮಾತ್ರ ಆಧಾರಶುದ್ಧಿಯಾಗುವದು. ಅಲ್ಲಿಯ ವರೆಗೆ ಯೋಗಾನುಭವಗಳ ಬಗೆಗಾಗಲಿ, ಜಗತ್ಕಾರ್ಯದ ಬಗೆಗಾಗಲಿ ಪ್ರಯತ್ನಿಸುವುದನ್ನು ಈ ಯೋಗವು ಬಲವಾಗಿ ನಿಷೇಧಿಸುತ್ತದೆ. ಮೊಟ್ಟಮೊದಲಿಗೆ ಆಧಾರಶುದ್ಧಿ, ಆಮೇಲೆ ಸಚರಾಚರ ಭೂತಗಳಲ್ಲಿ ಸರ್ವಾಂತರ್ಯಾಮಿಯ ಸಾಕ್ಷಾತ್ಕಾರದಿಂದ ತ್ರಿಗುಣಗಳ ಸಂಕೋಲೆಯೊಳಗಿಂದ ಬಿಡುಗಡೆ, ಅನಂತರ ನಿಖಿಲಾನಂದ, ಆಬಳಿಕ ಅಂಥ ಸತ್ಯಾನಂದದ ಫಲಸ್ವರೂಪವಾಗಿ ಲಭಿಸುವ ಯೌಗಿಕ ಯೌವನ. ಇಷ್ಟೆಲ್ಲ ಮುಗಿದಬಳಿಕ ಭಗವತ್ಸಂದೇಶಾನುಸಾರವಾಗಿ ಜಗತ್ತಿನಲ್ಲಿ ಸತ್ಯಯುಗ ಪ್ರವರ್ತನೆಗೊಳಿಸುವ ಮಹಾಕಾರ್ಯ. ಸಿದ್ಧ ಜೀವನದ ಪ್ರಾಪ್ತಿಯೇ ಈ ಯೋಗದ ಸ್ವಾರಾಜ್ಯ; ಜಗತ್ತಿನ ಮೇಲೆ ಸ್ವರ್ಗವನ್ನು ಇಳಿಸುವದೇ ಇದರ ಸಾಮ್ರಾಜ್ಯ. ಪುರಾತನ ವೇದಾಂತದೊಳಗಿನ ಸ್ವಾರಾಜ್ಯ ಸಿದ್ಧಿಯೂ ಸಾಮ್ರಾಜ್ಯ ಸಿದ್ಧಿಯು ಈ ಪೂರ್ಣ ಯೋಗದಲ್ಲಿ ಹೀಗೆ ವಿರಾಟ ರೂಪವನ್ನು ಧಾರಣ ಮಾಡಿರುತ್ತವೆ. ಈ ಯೋಗದ ಮೂಲಕ ಸ್ವಸ್ವರೂಪ ಪ್ರಾಪ್ತನಾದ ದೇವ ಕರ್ಮಿಯ ಕರ್ಮವೆಂಬುದು ಸೂರ್ಯ,ಚಂದ್ರ, ತಾರಾಗಣಗಳಂತೆ

ಅವಿರಾಮವೂ ಅಖಂಡವೂ ಅಜೇಯ್ಯವೂ, ಅನಿರ್ಬಂಧಿತವೂ, ಆನಂದಪೂರ್ಣವೂ ಆಗಿದ್ದು ಅದು ಅವನಲ್ಲಿ ಶ್ವಾಸಪ್ರಶ್ವಾಸಗಳಷ್ಟು ಸಹಜ ದಶೆಗೆ ಮುಟ್ಟಿರುತ್ತಿರುವದು. ಹೀಗೆ ಜ್ಞಾನ, ಭಕ್ತಿ, ಕರ್ಮಗಳ ಸಮನ್ವಯುವೇ ಪೂರ್ಣಯೋಗದ ಮಹತ್ಕಾರ್ಯವೆಂದು ಗುರು ಅರವಿಂದರು ಸಾರುವರು.

ಕೆಲವು ಶಬ್ದಗಳನ್ನು ಮಾತ್ರ ಕೊನೆಯಲ್ಲಿ ಹೇಳುವುದು ಅಗತ್ಯವಾಗಿದೆಯೆಂದು ತೋರುತ್ತದೆ. ಯಾಕೆಂದರೆ ಪ್ರಸ್ತುತ ವಿಷಯಕ್ಕೆ ಹೊರಪಟ್ಟ ಹಲಕೆಲವು ಮಹತ್ವದ ಸಂಗತಿಗಳನ್ನು ಅವೆಷ್ಟೇ ಮಹತ್ವದವುಗಳಾಗಿದ್ದರೂ ಸಹ ಲೇಖಕ ( ನಾದ ನಾಸು ) ಅವುಗಳನ್ನು ಹಾರಿಸಿಬಿಟ್ಟದ್ದರಿಂದಲೂ, ಮತ್ತು ( ಬಹು ವಿಶದವಾಗಿ ಹೇಳಬೇಕಾಗಿರುವ ಮಾತುಗಳನ್ನು ) ಸಂಕ್ಷೇಪೀಕರಿಸಿರುವದರ ಮೂಲಕವೂ ಪ್ರಾದುರ್ಭವಿಸಲಿರುವ ಕೆಲವೊಂದು ತಪ್ಪುತಿಳುವಳಿಕೆಗಳ ನಿರಸನದ ಕಡೆಗೆ ಲಕ್ಷ್ಯವನ್ನು ಪೂರೈಸುವುದು ಒಳ್ಳೆಯದಾಗಿದೆ.

ಸಂಕಲ್ಪಶಕ್ತಿಯ ಪರಿಪೂರ್ಣ ಪ್ರಯೋಗದಲ್ಲಿ ಪ್ರಯತ್ನನಿಷೇಧದ ಅರ್ಥವು ಕರ್ಮತ್ಯಾಗವಲ್ಲ. ಅಲ್ಲಿ ಹೇಳಿದ ಹೋರಾಟವೆಂಬುದು ಆಂತರಿಕವೇ ಹೊರತು ಬಾಹ್ಯಕವಲ್ಲ. 'ಆರಂಭ'ವೇ ಹೊರತು ಕರ್ಮವಲ್ಲ. ಗೀತೆಯಲ್ಲಿ ಶ್ರೀಕೃಷ್ಣನು ಸರ್ವಾರಂಭಪರಿತ್ಯಾಗದಿಂದ ಕೂಡಿದ ಕರ್ಮದ ಆದರ್ಶವನ್ನು ಪ್ರತಿಪಾದಿಸುವಾಗ ಈ ಪ್ರಭೇದವನ್ನು ಸ್ಪಷ್ಟಗೊಳಿಸಿದ್ದಾನೆ. ಸರ್ವಾರಂಭಾನ್ ಪರಿತ್ಯಜ್ಯ. **ನಾವು ಕರ್ಮ ಹಾಗೂ ಅದರ ಸಾಫಲ್ಯದ ವಿಷಯದಲ್ಲಿ ಪ್ರಯೋಗಿಸುವ ಸಂಕಲ್ಪಶಕ್ತಿಯಲ್ಲಿ ಯಾವ ಪ್ರಯಾಸವೂ ಆಶೆ ಪ್ರತ್ಯಾಶೆಗಳೂ ಇರಕೂಡದು; ಹಾಗೂ ನಮ್ಮ ಇಂದ್ರಿಯಗಳೂ ದೇಹ-ಮನ-ಬುದ್ಧಿಗಳೂ ತಮ್ಮ ತಮ್ಮ ಅತ್ಯಂತ**

**ಶುದ್ಧೀಕೃತ ಕೇವಲ ಸಹಜತೆಯಿಂದ ತಮ್ಮ ಕಾರ್ಯವನ್ನೆಸಗುತ್ತಿರುಬೇಕು.**

**ಶುದ್ಧೀಕೃತ ಉಚ್ಚ ಸಂಕಲ್ಪಶಕ್ತಿಯು ಕೆಲವೊಂದು ಮಟ್ಟಿಗೆ ಅಭ್ಯಸ್ತವಾಗುವವರೆಗೆ ಸಾಧಕನು ತನ್ನ ಈ ಪದ್ಧತಿಯನ್ನು ಜೀವನದೊಳಗಿನ ಮಹತ್ವದ ಕೃತಿಗಳ ಸಲುವಾಗಿ ಪ್ರಯೋಗಿಸುವ ಗೊಡವೆಯನ್ನು ಬಿಟ್ಟಿರಬೇಕು. ಆ ಮೇಲೆಯೂ ಕೂಡ ಮೊದಲಿಗೆ ಸ್ವಲ್ಪ ಹೊತ್ತಿನಲ್ಲಿ ಮುಗಿಯುವಂಥ ವಿಷಯಗಳಿಗೂ, ಬಳಿಕ ಬಹಳ ಹೊತ್ತಿನಲ್ಲಿ ಮುಗಿಯುವಂಥವುಗಳಿಗೂ ಪ್ರಯೋಗಿಸುವುದು ಒಳ್ಳೆಯದು. ಸಾಧನಾವಧಿಯಲ್ಲಿ ಆಂತರಂಗಿಕ ಪ್ರಗತಿ ಮತ್ತು ಕೆಲಸಕ್ಕೆ ಬಾರದ ಚಿಕ್ಕದೊಡ್ಡ ಕೃತಿಗಳು ಇವೇ ಆತನ ಅಭ್ಯಾಸ ಹಾಗೂ ಪರೀಕ್ಷಣಗಳ ಕ್ಷೇತ್ರವಾಗಿರತಕ್ಕದ್ದು.**

ಎರಡನೆಯ ಮಾತೇನೆಂದರೆ— ಈ ಪುಟ್ಟ ಉಪನ್ಯಾಸಗಳಲ್ಲಿ ನಿರ್ದೇಶಿಸಿರುವ ವಿಧಾನವು ಪರಿಪೂರ್ಣವಾಗಿದೆಯೆಂದಾಗಲಿ, ಅದು ಏನೂ ಉಳಿಸಿಲ್ಲವೆಂದಾಗಲೀ ಗ್ರಹಿಸಕೂಡದು. ಇಷ್ಟೇ ಅಲ್ಲ, ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿರುವ ಅಂಶಗಳಲ್ಲಿ ಕೂಡ ಸಾಧಕರಿಗೆ ತಿಳಿದಿರಲವಶ್ಯವಾದ ಸಮಸ್ತ ವಿಷಯವು ಹೇಳಲಾಗಿದೆಯೆಂದು ಭಾವಿಸಕೂಡದು. ತಿರುಗಿ ಕೇಳಿದರೆ, ಪ್ರಾರಂಭದವರಿಗೆ ಪ್ರಯೋಜನಕ್ಕೆ ಬರಬಹುದಾದ ಕೆಲವೇ ಮಾತ್ರ ಮುಖ್ಯ ವಿಚಾರಗಳನ್ನು ವಿಸ್ತಾರವಾಗಿ ಮಂಡಿಸಲಾಗಿದೆ. ಹೆಚ್ಚು ಮುಂದುವರಿದವರಿಗೆ ಈ ಸೂಚನೆಗಳ ಪ್ರಯೋಜನದ ಆಚೆಗೆ ಅವರು ವೇಗದಿಂದ ಬೆಳೆದಿರುವುದಾಗಿ ತೋರುವದು; ಮತ್ತು ಜ್ಞಾನ ಬರುವುದಕ್ಕಿಂತ ಮುಂಚೆ ಘನತರವಾಗಿ ರೂಪಾಂತರವನ್ನೂ ತಿದ್ದುಪಾಟನ್ನೂ ಹೊಂದಬೇಕಾಗಿದೆಯೆಂಬದೂ ಅವರಿಗೆ ಕಂಡುಬರುವದು. ಆವರೆಗೆ ಮಾತ್ರ ಅವು ಪರಿಪೂರ್ಣವಾಗಿವೆಯೆಂದೂ ತೃಪ್ತಿಕರವಾಗಿವೆಯೆಂದೂ ತಿಳಿಯಲಿಕ್ಕೆ ಅಡ್ಡಿಯಿಲ್ಲ.

ಕೊನೆಗೆ, ಇಲ್ಲಿ ನಿರ್ದೇಶಿಸಲ್ಪಟ್ಟ ವಿಶಿಷ್ಟ ಯೋಗಮಾರ್ಗದ ಧ್ಯೇಯವು, ವೈಯ್ಯಕ್ತಿಕ ಇಚ್ಛಾಶಕ್ತಿಯನ್ನು ಪ್ರಸ್ಥಾಪಿಸುವುದಾಗಿರದೆ ಅದನ್ನು ಸಮರ್ಪಿಸುವುದೇ ಆಗಿದೆ. ಅನಂತಸತ್ತೆಯ ನಿರ್ದೇಶ ಹಾಗೂ ನಿಯಂತ್ರಣಕ್ಕೆ ವೈಯಕ್ತಿಕ ಇಚ್ಛಾಶಕ್ತಿಯ ಸಮರ್ಪಣವೂ ಪರಿಪೂರ್ಣವೂ ನಿಶ್ಶೇಷವೂ ಲಾಲಸೆಯ ಅಭಾವವೂ ಆಗಲಿಕ್ಕೆಬೇಕು. ಆಧಾರಶಿಕ್ಷಣದ ಅನುಪಾನವೆಲ್ಲ ಇದೇ ಉದ್ದೇಶಕ್ಕಾಗಿ. ಸಮರ್ಪಣದ ಪರಿಪೂರ್ಣತೆಗೆ ಅಡ್ಡಬಾರದಂತೆ ಅಸಂಸ್ಕೃತ ಮಾನವನ ಪ್ರಕ್ಷುಬ್ಧವಾಸನೆ ಮತ್ತು ಪ್ರೇರಣೆಗಳನ್ನೂ, ಒರಟು ಗರ್ವ ಮತ್ತು ಅಹಂಕಾರಗಳನ್ನೂ, ವ್ಯರ್ಥ ಸ್ವಯಂಪ್ರತಿಷ್ಠ, ತರ್ಕ ಮತ್ತು ಕಲ್ಪನೆಗಳನ್ನೂ ವಶಪಡಿಸಿಕೊಳ್ಳಬೇಕಾದುದೇ ಪ್ರಥಮವಿಧಾನವು. ಇನ್ನು ಎರಡನೆಯ ವಿಧಾನವೆಂದರೆ ಸರ್ವೋನ್ನತನಿಗೆ ಯಜ್ಞಸ್ವರೂಪವಾಗಿ ನೈವೇದ್ಯವನ್ನು ಮಾಡಲಿಕ್ಕೆಂದು ದುರ್ಬಲವೂ, ದಿಗ್ಭ್ರಮಿತವೂ, ಆತ್ಮವಿಶ್ವಾಸರಹಿತವೂ, ಅಜ್ಞಾನಪೂರ್ಣವೂ ಆದ ಸಾಮಾನ್ಯ ಶಕ್ತಿಗೆ ಪ್ರತಿಯಾಗಿ–ಬಲಿಷ್ಠವೂ, ಸಮರ್ಥವೂ, ಪರಿಣಾಮಕಾರಕವೂ ಆದ ಕೃತುಶಕ್ತಿಯನ್ನು ಸಂಪಾದಿಸುವುದು.

ಸಿದ್ಧಯೋಗಿಯ ಕರ್ಮವು–ಭಾಸ್ಕರನ ಹಾಗೂ ತಾರಕೆಗಳ ಕರ್ಮದಂತೆ ಮತ್ತು ಹಿಮಖಂಡದ ಹಾಗೂ ವಾಯುಪ್ರವಾಹಗಳ ಕರ್ಮದಂತೆ, ತೇಲುವ ಚಂದ್ರಮ ಹಾಗೂ ತೂಗಾಡುವ ಹೂವುಗಳ ಕರ್ಮದಂತೆ, ಇದಲ್ಲದೆ ಅಗ್ನಿಯ ಹಾಗೂ ಧೂರೇಣುಗಳ ಕರ್ಮದಂತೆ ಅದ್ವಿತೀಯ ಪರಾಶಕ್ತಿಯ ಸಂಕಲ್ಪದ ಮೂಲಕ ಶಾಂತವೂ ಉಜ್ವಲವೂ, ಅಥವಾ ಸಮರ್ಥವೂ ಪ್ರಖರವೂ, ಅಥವಾ ಉದಾರವೂ ಮಧುರವೂ ಪ್ರಯೋಜನಕರವೂ, ಅಥವಾ ಉನ್ನತವೂ ವಿನಮ್ರವೂ–ಆಗಿರತಕ್ಕದ್ದು. ಅಲ್ಲದೆ ಅದು ಅವಳಿಂದಲೇ ಪ್ರೇರಿಸಲ್ಪಟ್ಟು ಸಂಪೂರ್ಣವಾಗಿ ಅವಳಿಂದಲೇ ಪ್ರಯೋಗಿಸಲ್ಪಡತಕ್ಕದ್ದು. ತೋರಿಕೆಯಲ್ಲಿ ಅದು ಯಾವ ರೂಪವನ್ನೇ ತಾಳಿದರೂ ಸತತವಾಗಿ ಅದು ಸಾರ್ವಭೌಮಿಕಶಾಂತಿ, ಆತ್ಮಸಮರ್ಪಣ ಮತ್ತು ಆತ್ಮಜ್ಞಾನ ಇವುಗಳ ತಳಹದಿಯ ಮೇಲೆ ಕೆಲಸಗೆಯ್ಯುತ್ತಿರಬೇಕು.

---

# ಪರಿಶಿಷ್ಟ *

## ಭಾರತದ ಚಿತ್ತವೃತ್ತಿ ಆಧ್ಯಾತ್ಮಿಕತೆ

**ಒಂದು ಮಾತು ಮಾತ್ರ ನಿಜ. ಭೂತಕಾಲದಂತೆ ಭವಿಷ್ಯತ್ಕಾಲದಲ್ಲಿಯೂ ಭಾರತದ ಷಡ್ಜವೂ ಜೀವಸ್ವರವೂ ಆಧ್ಯಾತ್ಮ ಬುದ್ಧಿಯಲ್ಲಿಯೇ ಅಂಕುರಿಸುವದು.** ಆಧ್ಯಾತ್ಮಿಕತೆಯೆಂದರೆ ಜಗನ್ಮಿಥ್ಯೆಯೆನ್ನುವ ವೇದಾಂತಿಕ ರೀತಿಯಾಗಲಿ, ಕೈಕಟ್ಟಿಕೊಂಡು ಕಣ್ಣು ಮುಚ್ಚಿಕೊಳ್ಳುವದಾಗಲಿ ಅಲ್ಲ. ಭಾರತ ಸಂಸ್ಕೃತಿಯು ಕೆಲಕೆಲವು ಯುರೋಪ್ಯ ವಿಮರ್ಶಕರೂ, ಟೀಕಾಕಾರರೂ ಏನನ್ನೆಂದರೂ ಭಾರತವು ತನ್ನ ಶಕ್ತ್ಯುತ್ಸಾಹಗಳ ವೈಭವದ ಪೂರ್ವಯುಗಗಳಲ್ಲಿ ಹೀಗಿರಲಿಲ್ಲ. ಮುಂದೆ ಹೀಗೆ ಉಳಿಯಲಾರದು. **ವೇದಾಂತಿಕ ವಿಚಾರ ಸರಣಿಯು ಯಾವಾಗಲೂ ಭಾರತೀಯ ಚಿತ್ತ ರಚನೆಯ ಘಟಕಗಳಲ್ಲೊಂದಾಗಿ ಉಳಿಯತಕ್ಕದ್ದೇ; ಈ ಮಾರ್ಗದಲ್ಲಿ ಅದರ ಬೃಹತ್ತರವಾದ ಸಾರ್ವಭೌಮ ಶಕ್ತಿಗಳು ಎಂದೂ ಕಳೆಗುಂದಲಾರವೆಂಬ ಆಸೆಯೂ ಇದೆ.** ಆದರೆ ಪದಾರ್ಥವಿಜ್ಞಾನಶಾಸ್ತ್ರದ ವಸ್ತುಜ್ಞಾನವನ್ನೇ ಪ್ರಮಾಣವಾಗಿಟ್ಟುಕೊಂಡು ಸ್ಥೂಲ ವರ್ಗೀಕರಣದ ತರ್ಕಪದ್ಧತಿಯನ್ನನುಸರಿಸಿ ತತ್ತ್ವಜ್ಞಾನವೆಂದು ಕೆಲಸಮಾಡಿದ ಅರ್ವಾಚೀನ ಯುರೋಪ್ಯರ ವೇದಾಂತಕ್ಕೂ, ಫ್ರೆಂಚರ ಇಲ್ಲವೆ ಜರ್ಮನ್ನರ ಆಡಂಬರದ ಅಥವಾ ಅಗಾಧವಾದ ವಿಚಾರಪ್ರಪಂಚ ವಿಸ್ತಾರದ ವೇದಾಂತಕ್ಕೂ ಅಂತರವಿದ್ದಷ್ಟೇ ನಮ್ಮ ಭಾರತೀಯ ದರ್ಶನ ಶಾಸ್ತ್ರಕ್ಕೂ ಅವರ ಪದ್ಧತಿಗೂ

---

* ಯೋಗೀಶ್ವರ ಅರವಿಂದರ '**ಭಾರತೀಯ ನವಜನ್ಮ**' ಎಂಬ ಪುಸ್ತಕದಿಂದ.

ಇರುವದು. ದರ್ಶನಶಾಸ್ತ್ರವು ಎಂದಿನಿಂದಲೂ ಆತ್ಮಸಾಕ್ಷಾತ್ಕಾರದ ಬೌದ್ಧಿಕ ದರ್ಶನವನ್ನೇ ಪ್ರಮುಖವಾಗಿಟ್ಟುಕೊಂಡಿದೆ. ಏನೋ ಇತ್ತೀಚೆ ಅದರ ಒಲವು ಪಾರಲೌಕಿಕವಾಯಿತು. ಕ್ರಾಂತ ದರ್ಶನವನ್ನೂ ಅಂತಃಪ್ರೇರಣೆಯನ್ನೂ ಅವಲಂಬಿಸಿದ ವೈದಿಕ ವೇದಾಂತವೇ ಆಗಲಿ, ನವರಚನೆ, ನವೀನತೆಗಳುಳ್ಳ ಪ್ರಚಂಡ ಬುದ್ಧಿವಾದದ ಕಾಲಕ್ಕೆ ಹುಟ್ಟಿದ ಗೀತೆಯ ಕಾಲದ ವೇದಾಂತವೇ ಆಗಲಿ ಯಾವವೂ ಸ್ವಭಾವತಃ ಪ್ರಪಂಚ ವಿರಕ್ತಿಯುಳ್ಳವುಗಳಾಗಿರಲಿಲ್ಲ. ಇಹ ಜೀವಕ್ಕೇನಾದರೂ ನಿಜವಾದ ಬೆಲೆಯಿಹುದೋ ಎಂದು ಸಂಶಯಾಕುಲತೆಯನ್ನುಂಟು ಮಾಡಿದ ಬೌದ್ಧ ಮತವೂ ಕೂಡ ಅದನ್ನೊಂದು ಬುದ್ಧಿವಾದನೆಂದೇ ಹೂಡಿತು. ಆ ಮತದ ಚೈತನ್ಯದಿಂದ, ನೀತಿಶಾಸ್ತ್ರದಿಂದ ಸಾಧನ ಪದ್ಧತಿಯಿಂದ ಮಾನವ ಜೀವನಕ್ಕೆ ಹೊಸ ತ್ರಾಣ, ಹೊಸ ಅರ್ಥ, ಸುಕುಮಾರವಾದ ಆದರ್ಶವಾದಿತ್ವಗಳು ಬಂದು, ಪ್ರಪಂಚ ನಿರೂಪಣಾಮಯವಾದ ಕಲೆಗಳಿಗೂ ವ್ಯವಹಾರ ರಾಜಕಾರ್ಯಗಳಿಗೂ ನವಜನ್ಮವೇ ಬಂದಿತು. **ದೃಢವಾಗಿ ಆತ್ಮತತ್ವವನ್ನರಿತು, ಜೀವನವನ್ನು ಹೊಸ ಅಚ್ಚಿಗೆ ಹಾಕಿ, ಜೀವಕಳೆದುಂಬುವದೇ ಭಾರತೀಯ ಚಿತ್ತದಸ್ವಭಾವ ಪ್ರವೃತ್ತಿಯಾಗಿರುವದರಿಂದ, ಅದಕ್ಕೆ ಗೌರವ, ತ್ರಾಣ, ನಿರಾಮಯತೆ ಬಂದಾಗಲೆಲ್ಲ ಈ ಪಂಥಕ್ಕದು ಮರಳಲೇಬೇಕು.**



## ನಮ್ಮ ಗ್ರಂಥ ಮಾಲೆಯ

## ಹಿ ತೈ ಷಿ ಗ ಳು

೧ ಶ್ರೀಮಂತ್ ಶಾಂತವೀರ ಸ್ವಾಮಿಗಳು ಬಬಲೇಶ್ವರ
೨ ,, ಸಂಗನಬಸವ ಸ್ವಾಮಿಗಳು ಬಂಥನಾಳ
೩ ಮಾಧವದಾಸಜಿ ಸಾಧೂ ಮಹಾರಾಜ ಪಂಢರಪೂರ
೪ ಶ್ರೀ ಗುರುಪಾದೇಶ್ವರ ತತ್ವಜ್ಞಾನ ಮಂದಿರ ಮ್ಯೆಂದರಗಿ
೫ ವಿಜಾಪುರದ ಸಾಹಿತ್ಯಾಭಿಮಾನಿ ಧನಿಕ ಮಹಾಶಯರೊಬ್ಬರು
೬ ಶ್ರೀಮಂತ ಬಾಬಾಸಾಹೇಬ ಸರದೇಸಾಯರು ರಕ್ಕಸಗಿ–
ವಿಜಾಪುರ
೭ ಶ್ರೀ. ಸಕ್ಕರೀ ಬಂಧುಗಳು ಇಲಕಲ್ಲ
೮ ಶ್ರೀಮಾನ್ ಹ. ಬ. ಕೊಣ್ಣೂರ ಎಮ್. ಎ. ವಿಜಾಪುರ
೯ ಜ್ಞಾನೋದಯ ನಾಟಕ ಮಂಡಳಿಯ ಒಡೆಯರಾದ
ಆರ್. ಜಿ. ಹೊೀಳಗಿಯವರು ಹಂದಿಗನೂರು
೧೦ ಶ್ರೀಮಂತ ರಾಮರಾವ ಚಿಂತಾಮಣಿ ನಾಡಗೌಡರು ಹಲಸಂಗಿ
೧೧ ಶ್ರೀ. ಸರಸಂಬಿ ಶಿವಲಿಂಗಪ್ಪನವರು ಚಡಚಣ

ಹೊಸ ವರ್ಷದ

# ನಮ್ಮ ಸಹಾಯಕರು

೧ ಶಿಕ್ಷಕರ ಸಹಕಾರಿ ಸಂಘ ತಾಲೂಕ ಇಂಡಿ ೨೦
೨ ಶ್ರೀ. ದೊಟ್ಟವೋಟಿ ಅಂದಾನೆಪ್ಪನವರು ಜಕ್ಕಲಿ M. L. A. ೧೫
೩ ,, ಎನ್. ವ್ಹಿ. ಕುಲಕರ್ಣಿ ಸ್ಟೇಷನ್ ಮಾಸ್ತರರು ನಾಸಿಕ
೪ ,, ತಂಬಾಕೆ ಸಿದ್ಧರಾಮಪ್ಪನವರು ತಾಳೀಕೋಟಿ
೫ ,, ಶಿಕ್ಷಕರ ಸಹಕಾರಿ ಸಂಘ ತಾಲೂಕ ಬಾಗೇವಾಡಿ ೧೦
೬ ,, ಲಿಂಗಪ್ಪ ಬಸಪ್ಪ ದೇಸಾನಿ ಆ। ಮಾಸ್ತರರು ನಾಲತವಾಡ ೧೦
೭ ,, ಎನ್. ಜಿ. ಎಮ್. ೮॥
೮ ,, ಬಿ. ಗುರುಸಿದ್ದಣ್ಣ ಭಾರತ ವ್ಯಾಯಾಮಶಾಲೆ ಕೊಟ್ಟೂರ ೫
೯ ,, ಮುಡಿವಾಳಪ್ಪ & ಬ್ರದರ್ಸ ಶಿವಾನಂದ ಪ್ರೆಸ್ ಗದಗ ೫
೧೦ ,, ಎಸ್. ವ್ಹಿ. ಅಡ್ಡಣಗಿ ಬಿ. ಎ. ಎಲ್‌ಎಲ್. ಬಿ. ಬೆಳಗಾಂವ ೫
೧೧ ಡಾ. ಪಿ. ಪಿ. ಹಳೇಮನಿ M. B. B. S. (ಮುಂಬಯಿ) L. R. C. P. (ಲಂಡನ) M. R. C. S. (ಇಂಗ್ಲಂಡ) ಹುಬ್ಬಳ್ಳಿ ೫
೧೨ ಶ್ರೀ. ಆರ್. ಎಚ್. ಕುಲಕರ್ಣಿ B. A. LL. B. ವಕೀಲರು ವಿಜಾಪುರ ೫
೧೩ ,, ಎಮ್. ಬಿ. ಕೋರಬು ಡಿ. ಸ್ಕೂಲಬೋರ್ಡ ಸುಪರವಾಯಜರರು ವಿಜಾಪೂರ ೫
೧೪ ,, ಜಿ. ಎಸ್. ಕಂಬಳಿ ಎಕ್ಸಾಯಿಜ್ ಇನಸ್ಪೇಕ್ಟರರು ಬಾಗಲಕೋಟಿ ೫
೧೫ ಡಾ. ಸ್ವಾಮಿ ಚಂದ್ರಶೇಕರಶಾಸ್ತ್ರಿಗಳು ಇಲಕಲ್ಲ
೧೬ ಶ್ರೀ. ರಾಮಪ್ಪ ಲಕ್ಷ್ಮಣಪ್ಪ ಚಿಕ್ಕೋಡಿ ಜ. ಮರ್ಚಂಟ ರಬಕವಿ ೫
೧೭ ,, ಬಸವಂತಪ್ಪ ದೊಡ್ಡಪ್ಪ ಫತ್ತೇಪೂರ ಜ. ಮರ್ಚಂಟ ಬದಾಮಿ ೫

೧೮ ,, ಎಸ್ ಎಸ್ ಹಿರೇಮಠ B. A. ಯುನಿಯನ್
ಸುಪರ್‌ವಾಯ್‌ಜರರು ಗದಗ ೫
೧೯ ,, ಹಾರನಹಳ್ಳಿ ಮಾಸ್ತರರು M. A. ಗ। ಹೈಸ್ಕೂಲ ವಿಜಾಪುರ ೫
೨೦ ,, ಜಿ. ಎಲ್. ವೈದ್ಯ ಆಡಿಟರ ಕೊ. ಆ. ಸೋಸಾಯಟಿ
ಆಫೀಸ ವಿಜಾಪೂರ ೫
೨೧ ,, ಆರ್. ಬಿ. ಅಲಭಾಳ B. A. ಡಿ. ಸ್ಕೂಲಬೋರ್ಡ
ಸುಪರವಾಯ್‌ಝರ್ ವಿಜಾಪುರ ೫
೨೨ ,, ಬಿ. ಪಿ. ಹಿರೇಮಠ ಯುನಿಯನ್ ಮ್ಯಾನೇಜರರು ಬದಾಮಿ ೫
೨೩ ,, ಎಂ. ಬಿ. ಕಿಣಗಿ ಮಾಲಕರಿ ಕಚೇರಿ ಪೀಳಗಿ ೫
೨೪ ,, ಟಿ. ಎಂ. ಹಾಳಕೇರಿ ಅ। ಮಾಸ್ತರರು ಬದಾಮಿ ೫
೨೫ ,, ತಿ. ವೆ. ಕುಲಕರ್ಣಿ ಹೆ। ಮಾಸ್ತರರು ಸಾಲವಡಗಿ ೫
೨೬ ,, ಲಿಂಗಪ್ಪ ಶಿವೂರ ಅಥಗಾರ್ ೫
೨೭ ,, ಲಕ್ಷ್ಮಣ ಭೀಮರಾವ ಗುಮಾಸ್ತೆ ಹೆ। ಮಾಸ್ತರರು
ರೇವತಗಾಂವ ೫
೨೮ ,, ಗುರುನಾಥ ಆಪ್ಪಾಜಿ ಕುಲಕರ್ಣಿ ಹೆ। ಮಾಸ್ತರರು
ಅಗರಖೇಡ ೫
೨೯ ,, ಸಿದ್ದಪ್ಪ ಬಸಪ್ಪ ಜಮಖಂಡಿ ಹೆ। ಮಾಸ್ತರರು ಭತ್ತಗುಣಿಕಿ ೫
೩೦ ,, ನಾರಾಯಣ ಗುಂಡಾಚಾರ್ಯ ಆದ್ಯ ಹೆ। ಮಾಸ್ತರರು
ಮಿರಗಿ ೫
೩೧ ,, ಬಿ. ಎಸ್. ಬ್ಯಾಳಿ ಅ। ಮಾಸ್ತರರು ಕೆಲವಡಿ ೫
೩೨ ,, ರೇವಣಸಿದ್ಧಪ್ಪ ಸಂಗಪ್ಪ ಮದಭಾವಿ ಹಲಂಸಗಿ ೫
೩೩ , ಗುರುಬಾಳಪ್ಪ ಸದಾಶಿವಪ್ಪ ಜೀರಂಕಲಗಿ ಚಡಚಣ ೫
೩೪ ,, ಜಿ. ಬಿ. ಪಿ. ೫

## ಉದಯ

ವಿಜಾಪೂರ ಜಿಲ್ಹೆಯಲ್ಲಿ ಬಹು ವಿಧದ ವಿಷಯುಗಳಿಗೆ ಎದೆಗೊಟ್ಟ ಒಂದೇ ಒಂದಾದ ರಾಷ್ಟ್ರೀಯ ವಾರಪತ್ರಿಕೆ. ಮಾತಿಸ ಮಲ್ಲಸ ಪ್ರಚಲಿತ ವಿಷಯುಗಳ ಮೇಲಿನ ಹುರುಳುಳ್ಳ ಹರಟೆಗಳು ವಾರದ ವರದಿ, ಸಂತೆಯ ಸುದ್ದಿ ವನಿತಾವಿಭಾಗ ಹಳ್ಳಿಯವೈದ್ಯಕ ವಿವಿಧ ವೈಚಿತ್ರ್ಯ ಮತ್ತು ಲೋಕಲ್‌ಬೋರ್ಡ ಮೊದಲಾದ ಸ್ಥಳೀಯ ಸಂಸ್ಥೆಗಳ ಹೊಸ ಹೊಸ ಸುದ್ದಿಗಳು ಬರುತ್ತಿರುವವು. ವಾ. ಚಂದಾ. ೩ ರೂ. ಮಾತ್ರ.

ವಿಳಾಸ:— '**ಉದಯ**' ಕಾರ್ಯಾಲಯ, ವಿಜಾಪೂರ

---

## ಶರಣಸಂದೇಶ

ಸಂಪಾದಕರು:— **ಶ್ರೀ ಹರ್ಡೇಕರ ಮಂಜಪ್ಪನವರು**

ನೀವು ಹಿಂದುಗಳೋ? ಹಾಗಾದರೆ ಜಾಗೃತೆ ಚಂದಾದಾರರಾಗಿರಿ. ಶ್ರೀ ಬಸವಾದಿ ಪ್ರಮಥರ ತತ್ವಗಳನ್ನು ಮತ್ತು ಹಿಂದೂ ಸಮಾಜದೇಳಿಗೆಯ ರೀತಿನೀತಿಗಳನ್ನು ಪ್ರಸಾರಗೊಳಿಸುವ ವಿಚಾರಕ್ರಾಂತಿಯ ವಾರಪತ್ರಿಕೆಯು ಕನ್ನಡದಲ್ಲಿ ಇದೊಂದೇ. ವಾ. ಚಂದಾ ೩ ರೂ. ಮಾತ್ರ.

ಮ್ಯಾನೇಜರ:— **ಶರಣಸಂದೇಶ**'

ಪೋ. ಆಲಮಟ್ಟಿ, ಜಿಲ್ಹಾ ವಿಜಾಪೂರ

---

## ಕಲಿಯುಗ

ಸಂಪಾದಕರು:— **ಡಾಕ್ಟರ ಗೋಪಾಲಕೃಷ್ಣರಾಯರು**

ಕಾಮವಿಜ್ಞಾನ, ಆರೋಗ್ಯವಿಜ್ಞಾನ, ಸಮಾಜವಿಜ್ಞಾನಗಳಿಗಾಗಿ ಮೀಸಲಾಗಿರುವ ಕನ್ನಡ ಸಾಹಿತ್ಯದ ಇತಿಹಾಸದಲ್ಲೇ ಪ್ರಥಮ ಮಾಸಪತ್ರಿಕೆ. ವಾರ್ಷಿಕ ಚಂದಾ ೧ ರೂ. ೮ ಆಣೆ.

ವಿಳಾಸ:–"**ಕಲಿಯುಗ**" ಕಾರ್ಯಾಲಯ,

ಧಾರವಾಡ

# ಅಲಲ! ಇಲ್ಲೇ ಸಮೀಪದಲ್ಲೇ!

## ನೀವೇ ಬರುವ ಕಾರಣವಿಲ್ಲ!

**ಕೇವಲ**

ಫೋಟೋ ಕಳಿಸಿದರೆ ಸಾಕು.

ದೊಡ್ಡ ಆಕಾರದಲ್ಲಿ ಚಿತ್ರಿಸುವೆವು.

ಬಣ್ಣಬಣ್ಣದಿಂದ ಶೃಂಗರಿಸುವೆವು.

ನಿಮ್ಮ ಹಿರಿಯರ ಭಾವಚಿತ್ರಕ್ಕೆ ಜೀವಕಳೆ ಬೇಕೆ?

ನಿಮ್ಮ ಹಿರಿತನದ ಯೋಗ್ಯತೆಗೆ ತಕ್ಕ ಬಣ್ಣದ
ಫೋಟೊ ಬೇಡವೆ?

ತೈಲ್ಯವರ್ಣದಿಂದ ತಾಳಿಕೆಯು ಕಾಗದದ
ಮೇಲೆ ಬರೆಸುವ ಈ ಚಿತ್ರಗಳು
ತಲೆತಲಾಂತರ ಮಾಸವು.

ಹೆಚ್ಚಿನ ವಿವರಗಳಿಗಾಗಿ ಕೆಳಗಿನ
ವಿಳಾಸಕ್ಕೆ ಬರೆಯಿರಿ.



**ಕಾಪಸೆ ರೇವಪ್ಪ**— ಕಲಾ ಕುಟೀರ, ಹಲಸಂಗಿ

**ಪೋ. ಹಲಸಂಗಿ ಜಿ. ವಿಜಾಪುರ**

# ಒಪ್ಪೋಲೆ

## ( ಪ್ರಥಮ ಪ್ರವೇಶ )

| ಪುಟ, ಪಂಕ್ತಿ | ತಪ್ಪು | ಒಪ್ಪು |
|---|---|---|
| ೬– ೬ | ದೇವನ ಜೀವ | ದೇವನ ಜೀವನ |
| ೬– ೭ | ಆದೇ ಆಗಿವೆ | ಒಂದೇ ಆಗಿವೆ |
| ೬– ೭ | ಒಂದೇ ಆಗಿವೆ | ಒಂದಾಗಿವೆ |
| ೧೭– ೨ | ದಾಸತ್ವವನ್ನು | ದಾಸವತ್ವವನ್ನು |
| ೧೭–೨೨ | ಯಾ ದೇವಿ | ಯಾ ದೇವೀ |
| ೧೭–೨೩ | ಸಮಸ್ತಸ್ಮೈ ( ೩ ಸಾರೆ ) | ಸಮಸ್ತಸ್ಯೈ ( ೩ ಸಾರೆ ) |
| ೩೫–೧೯ | ಋತುಂಭರಾ | ಋತಂಭರಾ |

## ( ಪೂರ್ಣಯೋಗ )

| | | |
|---|---|---|
| ೫–೧೦ | ನಿನಗೆ ಸಂಬುಗೆ | ನಿಮಗೆ ಸಂಬುಗೆ |
| ೫–೧೧ | ದೇಹವನ್ನು ಕುರಿತು | ದೇವನನ್ನು ಕುರಿತು |
| ೭–೨೨ | ನಿನ್ನ ಇದುರಿಗೆ | ನಿಮ್ಮ ಇದುರಿಗೆ |
| ೧೫– ೬ | ಅವಳು ಸಂಕಲ್ಪ | ಅವಳ ಸಂಕಲ್ಪ |
| ೩೧– ೭ | ಅಗಾಧ ಅಗತ್ಯ | ಅಗಾಧದ ಅಗತ್ಯ |
| ೩೯–೨೬ | ಸೋಪಪತ್ತಿಕ | ಸೋಪಪತ್ತಿಕವಾಗಿ |
| ೪೫– ೪ | ಸಂಸ್ಕಾರಗಳಿಗಿಷ್ಟೇ | ಸಂಸ್ಕಾರಗಳಿಷ್ಟೇ |
| ೪೮– ೧ | ಮನ ಅರ್ಥಬೋಧ | ಮನದ ಅರ್ಥಬೋಧ |
| ೫೦– ೬ | ಆ ವಿಭಾಜ್ಯ | ಅವಿಭಾಜ್ಯ |
| ೬೯– ೮ | ಯೋಗ ತಾಳುಮೇಳು, | ತಾಳುಮೇಳು |
| ೮೦–೧೮ | ಮಾನವು | ಮಾನಸವು |
| ೯೦–೨೨ | ಮಾಲೆ | ಮೂಲೆ |
| ೯೩– ೫ | ಪ್ರಕೃತದೇವಿ | ಪ್ರಕೃತಿದೇವಿ |
| ೯೫–೧೫ | ಅಂಥ ಪ್ರಯತ್ನ | ಅಂಧ ಪ್ರಯತ್ನ |
| ೧೦೦–೪ | ಸಮರ್ಪಣವೂ | ಸಮರ್ಪಣವೂ ಲಾಲಸೆಯ ಅಭಾವವೂ |
| ೧೦೨–೭ | ಇಹಜೀವ | ಇಹಜೀವನ |